KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮೇ ೧೧, ೨೦೦೬ (ವೈಶಾಖ ೨೧, ಶಕ ವರ್ಷ ೧೯೨೮) | ಸಂಚಿಕೆ ೧೯ |
|---|---|---|

## ಭಾಗ - ೪ -ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಇಂಧನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಂಇ 23 ಸಮನ್ವಯ 2006, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2006**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಕಲಂ 30 (1) (ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್.ಡಿ. ರೇವಣ್ಣ, ಮಾನ್ಯ ವಿಧಾನ ಸಭಾ ಸದಸ್ಯರು ಇವರನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ಮತ್ತು ಅದರ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 841

**FOOD, CIVIL SUPPLIES AND CONSUMER AFFAIRS SECRETARIAT**

**NOTIFICATION**

**No. FCS 32 FPP 2004, Bangalore, Dated: 20th March 2006**

In exercise of the powers conferred by clause 2(a) of the Lubricating Oils and Greases (Processing, supply and Distribution Regulation) Order, 1987 and in supercession of the Notification No.FCS 32 FPP 03, dated:25th May 2005, the Government of Karnataka hereby appoints the officers specified in column (2) of the table below to exercise the powers and to perform the functions of the competent authority under the said Order within the area specified in the corresponding entries in column (3) thereof:

| Sl. No. | Officers | Area |
|---|---|---|
| 1 | The Commissioner | The whole of the State of Karnataka |
| 2 | The Additional Director or Joint Director incharge of (PDS) | The Area comprised within the Bangalore Informal Rationing Area |

| Sl. No. | Officers | Area |
|---|---|---|
| 3 | The Joint Director (Civil Supplies) | The whole of State of Karnataka other than Bangalore informal rationing area. |
| 4 | The Deputy Commissioner, Bangalore District. | The area comprised within the limits of Bangalore Revenue District, excluding Bangalore Informal Rationing area. |
| 5 | The Deputy Commissioner of the Districts (Other than Bangalore District) | The area comprised within their respective jurisdiction. |
| 6 | The Deputy Director of Food and Civil Supplies of the Districts and the ranges. | The are comprised within the limits of their respective jurisdiction. |
| 7 | The Assistant Commissioners of Revenue Sub-Division. | The area comprised within their jurisdiction of their respective Revenue Sub-division |
| 8 | Deputy Superintendent of Police | The area comprised within the limits of their respective jurisdiction. |
| 9 | The Assistant Directors of Food and Civil Supplies. | The area comprised within the limits of their respective jurisdiction. |
| 10 | The Tahasildars of Taluks. | The area comprised within the limits of their respective jurisdiction. |
| 11 | Police Inspector | The area comprised within the limits of their respective jurisdiction. |

**Note:-** Informal Rationing Area means any area comprising a city constituted under the Karnataka Municipal Corporation Act, 1976 or a Municipality or a Notified Area Committed constituted or declared under the Karnataka Municipalities Act, 1964, specified as Informal Rationing Area by the Government.

By Order and in the name of the Governor of Karnataka,

**A.N. SHANTHAKUMARI**

P.R. 847

Under Secretary to Government,

Food, Civil Supplies and Consumer Affairs Department.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 976 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಬಸವರಾಜು ಬಿನ್ ದೊಡ್ಡಜವರಯ್ಯ, ಸೇನಾಪತಿಹಳ್ಳಿ, ಟಿ.ನರಸೀಪುರ ತಾಲ್ಲೂಕು ಇವರನ್ನು ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 848

ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 1006 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ರಾಮಪ್ರಸಾದ್ ಪೊಂಜಾ, ಸಜತಮೂಡ ಇವರನ್ನು ದಕ್ಷಿಣ ಕನ್ನಡ ಜಿಲ್ಲೆ ಬಂಟ್ವಾಳ ತಾಲ್ಲೂಕಿನ ಪಾಣೆ ಮಂಗಳೂರು ರೈತರ ಸೇವಾ ಸಹಕಾರ ಸಂಘ ನಿ., ಪಾಣೆಮಂಗಳೂರು ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 849

ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 1050 ಸಿಎಸ್‌ಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ಸುಣ್ಣಿಗೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ, ಸುಣ್ಣಿಗೆರೆ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶೇಖರಪ್ಪ ಬಿನ್ ಲಕ್ಷ್ಮಣಪ್ಪ, ಅಜ್ಜಿಹಳ್ಳಿ ಗ್ರಾಮ, ಚನ್ನಗಿರಿ ತಾಲ್ಲೂಕು
2) ಶ್ರೀ ಕುಮಾರ ಬಿನ್ ಚಂದ್ರಪ್ಪ ಸುಣ್ಣಿಗೆರೆ ಗ್ರಾಮ, ಚನ್ನಗಿರಿ ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ಪಿ.ಆರ್. 850 ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

**LAW, JUSTICE & HUMAN RIGHTS SECRETARIAT**
**NOTIFICATION**
**No. Law 305 LCE 2005(2), Bangalore, Dated: 7th March 2006**

In exercise of its powers conferred by Sub-Section (1) of Section 16 of the Code of Crimnal Procedure 1973, the Government of Karnataka after consultation with the High Court of Karnataka, hereby designate the following Small Causes Courts functioning in the State also as Chief Metropolitan Magistrate Courts:-

1. Judge, Court of Small Causes, Bangalore City
2. I Addl. Judge, Court of Small Causes, Bangalore City
3. II Addl. Judge, Court of Small Causes, Bangalore City
4. III Addl. Judge, Court of Small Causes, Bangalore City
5. IV Addl. Judge, Court of Small Causes, Bangalore City
6. VI Addl. Judge, Court of Small Causes, Bangalore City
7. VII Addl. Judge, Court of Small Causes, Bangalore City
8. VIII Addl. Judge, Court of Small Causes, Bangalore City
9. IX Addl. Judge, Court of Small Causes, Bangalore City
10. X Addl. Judge, Court of Small Causes, Bangalore City
11. XI Addl. Judge, Court of Small Causes, Bangalore City
12. XII Addl. Judge, Court of Small Causes, Bangalore City
13. XIII Addl. Judge, Court of Small Causes, Bangalore City
14. XIV Addl. Judge, Court of Small Causes, Bangalore City
15. XVI Addl. Judge, Court of Small Causes, Bangalore City
16. XVII Addl. Judge, Court of Small Causes, Bangalore City
17. XIX Addl. Judge, Court of Small Causes, Bangalore City

By Order and in the name of the Governor of Karnataka,
**R. NISAR AHMED**
P.R. 851 Under Secretary to Gvernment (Adn.I)(I/C)
Law, Justice & Human Rights Dept.

**PERSONNEL AND ADMINISTRATIVE REFORMS SECRETARIAT**
**NOTIFICATION**
**No. DPAR 13 SPS 2005, Bangalore, Dated: 25th March 2006**

Notification No. 14011/4/2005.IPS.I. dated:23.3.2006 of Government of India, Ministry of Home Affairs, New Delhi is hereby Republished.

---

**No. 14011/4/2005.IPS.I**
**Government of India/Bharat Sarkar**
**Ministry of Home Affairs/Grih Mantralaya**

**New Delhi, the 23 March 2006**

**NOTIFICATION**

In exercise of the powers conferred by sub-rule (1) of rule 9 of the Indian Police Service (Recruitment) Rules, 1954, read with sub-regulation (1) of regulation 9 of the Indian Police Service (Appointment by Promotion) Regulations, 1955, the President is pleased to appoint the following members of Karnataka Police Service to the Indian Police Service on probation and to allocate them to

the cadre of Karnataka under sub-rule (1) of the rule 5 of the Indian Police Service (Cadre) rules 1954. The appointments will take effect from the date of issue of this notification.

**Select List - 2005**

| Sl. No. | Name of the officer(S/Shri) | Date of Birth |
|---|---|---|
| 1. | G. Ramesh | 20.12.1954 |
| 2. | B.S. Prakash | 07.09.1954 |

By Order and in the name of the Governor of Karnataka,
**K. SUDHAKARA SHETTY**
Under Secretary to Gvernment,
Department of Personnel and Administratve Reforms (Services-I)

P.R. 852

**NOTIFCATION**

**No. DPAR 110 SAS 2002(Part), Bangalore, Dated: 1st April 2006**

Notification No. 1-14015/10/2003-AIS(I)-B. dated:31.3.2006 of Government of India, Ministry of Personnel, Public Grievance & Pensions Department of Personnel & Training, New Delhi is hereby reublished.

**No. 1-14015/10/2003-AIS(I)-B**
**Government of India**
**Ministry of Personnel, Public Grievances & Pensions**
**Department of Personnel & Training**

**New Delhi, the 31st March 2006**

**NOTIFICATION**

In exercise of the powers conferred by sub-rule (2) of rule 8 of the Indian Administrative Service (Recruitment) Rules, 1954, read with sub-regulation (1) of regulation 8 of the Indian ministrative Service (Appointment by Selection) Regulations, 1997 and Rule 3 of the Indian Administrate service (Probation) Rules, 1954, the President is pleased to appoint the following Non-State Civil Service officers of Karnataka to the Indian Administrative service on probation with immediate effect until further orders and to allocate them to the Karnataka Cadre, under sub-rule (I) of Rule 5 of the Indian Administrative service (Cadre) Rules, 1954.

**Select List - 2003**

| Sl. No. | Name of the officer(S/Shri) | Sl. No. | Name of the officer(S/Shri) |
|---|---|---|---|
| 1. | C.M. Shirol | 2. | S. Dayashankar |
| 3. | N. Sriraman | 4. | K. Viswanatha Reddy |
| 5. | N.S. Channappa Gowda | 6. | K. Ramanna Nak (ST) |
| 7. | Dr. V. Chandrasekar (SC) | 8. | Anwar Pasha |

By Order and in the name of the Governor of Karnataka,
**K. SUDHAKARA SHETTY**
Under Secretary to Gvernment,
Department of Personnel and Administratve Reforms (Services-I)

P.R. 853

**HOME AND TRANSPORT SECRETARIAT**

**NOTIFICATION No. HD 42 PCR 2006, Bangalore, Dated: 27th March 2006**

In pursuance of the Provisions contained in Section 6 of the Delhi Special Police Etablishment Act, 1946 (Act XXV of 1946) read with Section 21 of the General Clauses Act, 1897 (Central Act X of 1897), the Government of Karnataka accords consent to the extension of powers and jurisdiction to the member of the Delhi Special Police Establishment for investigation of case RC.No.7(E)/2005/EOW-I/DLI under Section 120-B read with 420, 467, 468, 471 IPC and Section 13(2) read with 13(1)(d) of Prevention of Corruption Act, 1988 and substantive offences thereof, against Shri Sandip Khandelwal, Khandelwal Associates, New Delhi, Shri Narendra Modi, Mumbai and M/s Rajshree Packagers Limited, Mangalore, for their fraudulent acts, and any other public servants or persons, in relation to, or in connection with the said offences, and any other offences committed in the course of the same transaction, arising out of the same facts, in regard to said case, within the whole State of Karnataka.

By Order and in the name of the Governor of Karnataka,
**R. RANGAMANI**
Under Secretary to Government,
Home and Transport Department (Crimes)

P.R. 854

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 1069 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕಿನ ಬೈರಮಂಗಲ ಮತ್ತು ಕೂಟಗಲ್ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ.,/ ಬ್ಯಾಂಕುಗಳ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ಬೈರಮಂಗಲ ವ್ಯವಸಾಯ ಸೇವಾ ಸಹಕಾರ ಸಂಘ**

1) ಶ್ರೀ ಮುದ್ಲಗಿರಿಯಪ್ಪ ಬಿನ್ ವೆಂಕಟರಮಣಯ್ಯ, ಬೈರಮಂಗಲ, ಬಿಡದಿ ಹೋ. ರಾಮನಗರ ತಾ.
2) ಶ್ರೀಮತಿ ಎನ್.ಎಸ್. ಸುಜಾತ ಕೋಂ ಚಲುವರಾಜು, ಹೊಸೂರು, ಬಿಡದಿ ಹೋ. ರಾಮನಗರ ತಾ.
3) ಶ್ರೀ ಶಿವರಾಮು ಬಿನ್ ಮಂಡಲ ಹುಚ್ಚಯ್ಯ, ಅಂಚಿಪುರ, ಬಿಡದಿ ಹೋ. ರಾಮನಗರ ತಾ.

**ಕೂಟಗಲ್ ವ್ಯವಸಾಯ ಸೇವಾ ಸಹಕಾರ ಸಂಘ**

1) ಶ್ರೀ ಹೆಚ್.ಎಸ್. ಪಂಚಾಕ್ಷರಿ ಬಿನ್ ಹೆಚ್.ಎಸ್. ಶಿವಣ್ಣ, ಕೂಟಗಲ್ ಹೋ. ರಾಮನಗರ ತಾ.
2) ಶ್ರೀಮತಿ ಉಮಾ ಕೋಂ ರಾಮಲಿಂಗಯ್ಯ ಕೂಟಗಲ್ ಹೋ. ರಾಮನಗರ ತಾ.
3) ಶ್ರೀ ಹುಚಯ್ಯ ಬಿನ್ ಸುಬ್ಬಯ್ಯ ಕೂಟಗಲ್ ಹೋ. ರಾಮನಗರ ತಾ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 855

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 1070 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕಿನ ವಿವಿಧ 03 ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ.,/ ಬ್ಯಾಂಕುಗಳ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ಅವ್ವೇರಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ**

1) ಶ್ರೀ ನಾಗರಾಜು ಬಿನ್ ಕಬ್ಬಾಳೇಗೌಡ, ಗುನ್ನೂರು, ರಾಮನಗರ ತಾ.
2) ಶ್ರೀಮತಿ ಸಾವಿತ್ರಮ್ಮ ಕೋಂ ವೆಂಕಟಗಿರಿಯಯ್ಯ ಸಬ್ಬಿಕೆರೆ, ರಾಮನಗರ ತಾ.

**ದೊಡ್ಡಗಂಗವಾಡಿ ವ್ಯವಸಾಯ ಸೇವಾ ಸಹಕಾರ ಸಂಘ**

1) ಶ್ರೀ ರಾಮಕೃಷ್ಣಯ್ಯ ಬಿನ್ ದಾಸೇಗೌಡ, ದೊಡ್ಡಗಂಗವಾಡಿ, ರಾಮನಗರ ತಾ.
2) ಶ್ರೀ ರಾಮಕೃಷ್ಣಯ್ಯ ಬಿನ್ ವೆಂಕಟಯ್ಯ, ದೊಡ್ಡಗಂಗವಾಡಿ, ರಾಮನಗರ ತಾ.

**ಪಿ.ಎಲ್.ಡಿ. ಬ್ಯಾಂಕ್, ರಾಮನಗರ**

1) ಶ್ರೀಮತಿ ಉಮಾದೇವಿ ಕೋಂ ಕೆಂಪಯ್ಯ ಭೂರಗಮರದದೊಡ್ಡಿ, ಕಸಬಾ ಹೋ. ರಾಮನಗರ ತಾ.
2) ಶ್ರೀ ಜಿ.ಬಿ. ಪುಟ್ಟಮಾದೇಗೌಡ ಬಿನ್ ಬೈರಪ್ಪ, ಜಾಲಮಂಲ, ಕೊಟಗಲ್ ಹೋಬಳಿ, ರಾಮನಗರ ತಾ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 856

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 1078 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡವರನ್ನು ಬೆಳಗಾಂ ಜಿಲ್ಲೆ ಅಥಣಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಅಥಣಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಯುನುಸ್ ಹಾಸೀಮಸಾಬ್ ಮುಲ್ಲಾ, ಅಥಣಿ
2) ಶ್ರೀ ಶಿವರಾಯ ಭೀಮಪ್ಪಾ ವಾಡೇದಾರ, ಐನಾಪುರ
3) ಶ್ರೀಮತಿ ಸುಶೀಲಾ ಕರೆಪ್ಪ ಸಣ್ಣಕ್ಕಿ, ಅಥಣಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 857

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 1081 ಸಿಎಸ್‌ಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕಿನ ಹಲಬುರ್ಗಾ ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ ನಿ., ಹಲಬುರ್ಗಾ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಕಾಶೇಪ್ಪ ಮೂಲ್ಗೆ, ಹಲಬುರ್ಗಾ
2) ಶ್ರೀ ಕಾಂತೇಪ್ಪ ಬಿನ್ ಈರಪ್ಪ ಹಾಲಹಿಪ್ಪರಗ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 858 ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 1097 ಸಿಎಸ್‌ಎಸ್ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2006**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕಿನ ಮಂಗಳವಾಡ, ಪಳವಳ್ಳಿ ಮತ್ತು ನಿಲಪ್ಪನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಇವುಗಳ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ಮಂಗಳವಾಡ ವ್ಯವಸಾಯ ಸೇವಾ ಸಹಕಾರ ಸಂಘ ನಿ.,**

1) ಶ್ರೀ ಆರ್. ರಂಗಧಾಮಪ್ಪ ಬಿನ್ ರಂಗಪ್ಪ, ಅರಸೀಕೆರೆ
2) ಶ್ರೀಮತಿ ಅನುಸೂಯಮ್ಮ ಕೋಂ ಮುದ್ದೀರಪ್ಪ, ಜಂಗಮರಹಳ್ಳಿ
3) ಶ್ರೀ ಸ್ವಾರಣ್ಣ ತಂದೆ ದಾಸಪ್ಪ, ಕರೆಕ್ಯಾತನಹಳ್ಳಿ

**ಪಳವಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ.,**

1) ಶ್ರೀ ಎಸ್.ಎ. ರಮೇಶ್ ಬಿನ್ ಎಸ್.ಓ. ಅಂಜನಪ್ಪ, ಶ್ರೀರಂಗಪುರ
2) ಶ್ರೀ ಜನಾರ್ಧನ ಬಿನ್ ಗೋರ್ಲ ಓಬಣ್ಣ, ಕೆಂಚಗಾನಹಳ್ಳಿ
3) ಶ್ರೀಮತಿ ಸರೋಮ್ಮ ಕೋಂ ಚಂದ್ರಶೇಖರ, ಪಳವಳ್ಳಿ

**ನಿಲಪನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ.,**

1) ಶ್ರೀ ಸೇವಾ ನಾಯಕ್ ಬಿನ್ ಸುಬ್ರನಾಯ್ಕ, ಬೂಪೂರ ತಾಂಡಾ
2) ಶ್ರೀಮತಿ ಲಕ್ಷ್ಮಮ್ಮ ಕೋಂ ತಿಮ್ಮಯ್ಯ ನೀಲಮ್ಮನಹಳ್ಳಿ
3) ಶ್ರೀ ಟಿ. ಹನುಮಂತರಾಯಪ್ಪ ಬಿನ್ ಸಣ್ಣಹನುಮಪ್ಪ ನೀಲಮ್ಮನಹಳ್ಳಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 859 ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂಕಇ 102 ಕಸನಿ 2005, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಪ್ರಕರಣ 16 ಮತ್ತು ಸದರಿ ಅಧಿನಿಯಮದಡಿ ರಚಿಸಲಾಗಿರುವ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು, 2000ದ ನಿಯಮ 29(ಬಿ)ರಡಿಯಲ್ಲಿ ನಿಗದಿಪಡಿಸಿರುವಂತೆ ಮೇಲ್ಮನವಿ ಪ್ರಾಧಿಕಾರಿಯಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 861 **ಕೆ. ಸಾಂಬಶಿವಂ**

ಪೀಠಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

## ಕಾರ್ಮಿಕ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಕಾಇ 28 ಎಲ್‌ಡಬ್ಲ್ಯುಎ 2006, ಬೆಂಗಳೂರು, ದಿನಾಂಕ: 10ನೇ ಏಪ್ರಿಲ್ 2006**

ಸರ್ಕಾರದ ಅಧಿಸೂಚನೆ ಸಂಖ್ಯೆ ಕಾಇ 67 ಎಲ್‌ಡಬ್ಲ್ಯುಎ 2005 ದಿನಾಂಕ 19.9.2005ಲ್ಲಿ 'ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ' ಯನ್ನು ಸಾರ್ವಜನಿಕ ಅಗತ್ಯ ಸೇವೆ ಎಂಬುದಾಗಿ ದಿನಾಂಕ: 19.9.05 ರಿಂದ ಆರು ತಿಂಗಳ ಅವಧಿಗೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸಂಸ್ಥೆಯನ್ನು ಇನ್ನೂ ಆರು ತಿಂಗಳ ಕಾಲ ಸಾರ್ವಜನಿಕ ಅಗತ್ಯ ಸೇವೆ ಎಂದು ಘೋಷಿಸುವುದು ಅವಶ್ಯಕವೆಂದು ಕರ್ನಾಟಕ ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕರ್ನಾಟಕ ಸರ್ಕಾರವು ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರ ಕಾಯ್ದೆ 1947ರ ಸಂಖ್ಯೆ 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 'ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ' ಯನ್ನು ಸಾರ್ವಜನಿಕ ಅಗತ್ಯ ಸೇವೆ ಎಂಬುದಾಗಿ ದಿನಾಂಕ: 19.32006 ರಿಂದ ಮುಂದಿನ ಆರು ತಿಂಗಳ ಅವಧಿಗೆ ಜಾರಿಯಲ್ಲಿರುವಂತೆ ವಿಸ್ತರಿಸಿ, ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 862

**ಎಂ.ಆರ್. ಮಹೇಶ್‌ಕುಮಾರ್**

ಪೀಠಾಧಿಕಾರಿ-2 (ಪ್ರಭಾರ), ಕಾರ್ಮಿಕ ಇಲಾಖೆ

## HEALTH AND FAMILY WELFARE SECRETARIAT

### NOTIFICATION

### No. HFW 30 IMM 2006 (P-I), Bangalore, Dated: 4th April 2006

In exercise of powers conferred under part VII, VIII, XA, XB and part XIV of the Drugs and Cosmetics Rules 1945 made under the provisions of Drugs and Cosmetics Act, 1940 (Central Act), Government of Karnataka hereby appoints Sri B.G. Prabhakumar Deputy Drugs Controller, head quarters, Bangalore, holding the charge of Drugs Controller to be the "Licensing Authority" for the State of Karnataka for the period from 4.4.2006 to 17.4.2006.

Further, in exercise of powers conferred under Rule 150B of Part XVA) of the Drugs and Cosmetics Rules, Government of Karnataka hereby appoint Sri B.G. Prabhakumar, Deputy Drugs Controller, Head Quarters, Bangalore, holding the charge of Drugs Controller to be "Approving Authority" for the purpose of Part XV(A) of the Drugs and Cosmetics Rules made under the provisions of the Drugs & Cosmetics Act, 1940 (Central Act) for the whole State of Karnataka for the period from 4.4.2006 to 17.4.2006.

Further in exercise of powers conferred under Section 21 (4) of Drugs & Cosmetics Act, 1940 (Central Act) read with Rule 50(2) of Drugs & Cosmtics Rules, Government of Karnataka hereby appoints Sri B.G. Prabhakumar, Deputy Drugs Controller, Head Quarters, Bangalore, holding the charge of Drugs Controller to be the "Controlling Authority" for the purpose of Chapter IV of Drugs and Cosmetics Act 1940 and Rules made thereunder for the period from 4.4.2006 to 17.4.2006.

By Order and in the name of the Governor of Karnataka,

**CHOMA NAIK .G**

P.R. 863

Deputy Secretary to Government-2,
Health & Family Welfare Department.

## HOME AND TRANSPORT SECRETARIAT

### NOTIFICATION

### No. HD 82 PCR 2006, Bangalore, Dated: 18th April 2006

In pursuance of the Provisions contained in Section 6 of the Delhi Special Police Establishment Act, 1946 (Central Act XXV of 1946) read with Section 21 of the Central Clauses Act, 1897 (Central Act X of 1897), the Government of Karnataka accords consent to the extension of powers and jurisdiction to the member of the Delhi Special Police Establishment for investigation of registered in Bangalore District, Halasoor Police Station Cr. No. 189/2005, u/s 471, 420 IPC, against Smt Shreeja Krishna Kumar d/o Balakrishna Nair, a resident of No.69, 5th Main, L.N. Layout, Marathahalli and M/s Uma Builders for their fradulent acts, and any other public servants or persons, in relation to, or in connection with the said offences, and any other offences committed in the course of the transaction, arising out of the same facts, in regard to said case, within the whole State of Karnataka.

By Order and in the name of the Governor of Karnataka,

**R. RANGAMANI**

P.R. 866

Under Secretary to Government,
Home and Transport Department (Crimes)

## FOOD, CIVIL SUPPLIES AND CONSUMER AFFAIRS SECRETARIAT

### NOTIFICATION

### No. FCS 241 EBT 2004, Bangalore, Dated: 15th April 2006

In exercise of the powers conferred by sub-section (1) of Section 71 of the Standards of Weights and Measures (Enforcement) Act, 1985 (Central Act 54 of 185), the Government of Karnataka hereby elegates the powers of the State Government in so far as it relaes to issue of certificate of approval of

models of the Weights nd Measures manufactured within the State which are intended to be sold within the State to the Controller of Legal Metrology, Government of Karnataka.

By Order and in the name of the Governor of Karnataka,

**N. VENKATACHALAPATHI**

P.R. 867

Under Secretary to Government,

Food, Civil Supplies and Consumer Affairs Department.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಕೃತೋಇ 10 ಕೃಇಮಂ 2006, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2006

ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಮತ್ತು ರಫ್ತು ನಿಗಮ ನಿಯಮಿತದ ಅಂತರ ನಿಯಮಾವಳಿಯ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 14(2)(ಎ)(ii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಂಡೆಪ್ಪ ಕಾಶಂಪುರ್, ಮಾನ್ಯ ಕೃಷಿ ಸಚಿವರು ಇವರನ್ನು ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಮತ್ತು ರಫ್ತು ನಿಗಮ ನಿಯಮಿತದ ನಿರ್ದೇಶಕರು ಹಾಗೂ ಅಧ್ಯಕ್ಷರನ್ನಾಗಿ ದಿನಾಂಕ:17.2.2006 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 868

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಗಾರಿಕೆ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ಅಧಿಸೂಚನೆ ಸಂಖ್ಯೆ:ಪಸಂಮೀ:245:ಮೀಇಇ:2005, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2006

ಕರ್ನಾಟಕ ಒಳನಾಡು ಮೀನುಗಾರಿಕೆ (ಸಂರಕ್ಷಣೆ, ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ 1996ರ ನಿಯಮ 7(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಮಗಳೂರು ಜಿಲ್ಲೆ, ಶೃಂಗೇರಿ ತಾಲ್ಲೂಕಿನ ಶೃಂಗೇರಿ ಪಟ್ಟಣ ಶ್ರೀ ಶಾರದ ಪೀಠದ ಬಳಿಯ ತುಂಗಾ ನದಿಯಲ್ಲಿನ ಅಪರೂಪದ ಹಾಗೂ ಅಳಿವಿನ ಅಂಚಿನಲ್ಲಿರುವ ಮಹಶೀರ್ ಮತ್ತು ಹರಗಿ (ಹುಲ್ಲುಗೆಂಡೆ) ಮೀನು ಸಂತತಿಯನ್ನು ಸಂರಕ್ಷಿಸುವ ದೃಷ್ಟಿಯಿಂದ ಈ ಕೆಳಕಂಡ ಗ್ರಾಮಗಳ ಸರ್ವೆ ನಂಬರುಗಳ ವ್ಯಾಪ್ತಿಯಲ್ಲಿ ಬರುವ ಪ್ರದೇಶವನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ "ಮತ್ಸ್ಯಧಾಮ"ವೆಂದು ಘೋಷಿಸಿದೆ.

| ಗ್ರಾಮ | ನದಿಯ ಎಡದಂಡೆ ಸರ್ವೆ ನಂಬರ್‌ಗಳು | ಗ್ರಾಮ | ನದಿಯ ಬಲದಂಡೆ ಸರ್ವೆ ನಂಬರ್‌ಗಳು |
|---|---|---|---|
| ಮೌಜೆ ವಿದ್ಯಾರಣ್ಯಪುರ ಕಸಬಾ ಶೃಂಗೇರಿ ತಾ: ಶೃಂಗೇರಿ | 308, ಊರಿನ ಜಾಗ ಮತ್ತು ಗ್ರಾಮ ಠಾಣ (ಇವುಗಳಿಗೆ ಸರ್ವೆ ನಂ:ಇರುವುದಿಲ್ಲ) 288,289,290,276,277, 278,279 | ಮೌಜೆ ಮೆಣಸೆ ಸಮ್ಮತ್ತು ಶೃಂಗೇರಿ ತಾ:ಶೃಂಗೇರಿ | 158,160,161,168,225,169,162, 192,195,194,196,199,48,49, 52,53,50,54,79 |
| ಕಸಬಾ ಶೃಂಗೇರಿ ಸಮ್ಮತ್ತು ಶೃಂಗೇರಿ | 1,2,3,31,22,201,202,203, 204,224,227,228 | | |

ಕರ್ನಾಟಕ ಒಳನಾಡು ಮೀನುಗಾರಿಕೆ (ಸಂರಕ್ಷಣೆ, ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ 1996ರ ನಿಯಮ 7(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲ್ಲೂಕಿನ ಶೃಂಗೇರಿ ಪಟ್ಟಣದ ಶ್ರೀ ಶಾರದ ಪೀಠದ ಬಳಿ ಮೇಲೆ ತಿಳಿಸಿದ ಸರ್ವೆ ನಂಬರುಗಳ ವ್ಯಾಪ್ತಿಯಲ್ಲಿ ಹರಿಯುವ ತುಂಗಾ ನದಿಯ ಪ್ರದೇಶದಲ್ಲಿ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಯಾವುದೇ ತರಹದ ಮೀನುಗಾರಿಕೆ ಚಟುವಟಿಕೆಯನ್ನು ನಿಷೇಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಕಮಲಕುಮಾರ್**

ಪಿ.ಆರ್. 871

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಕಾಇ 13 ಕಾಬಾನಿ 2006, ಬೆಂಗಳೂರು, ದಿನಾಂಕ: 12ನೇ ಏಪ್ರಿಲ್ 2006

ದಿ ಇಂಡಿಯನ್ ಬಾಯ್ಲರ್ಸ್ ಅಧಿನಿಯಮ, 1923ರ ಸೆಕ್ಷನ್ 34(2)ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೆ: ಎಸ್ ಸಿ ಎಂ ಷುಗರ್ಸ್ ಲಿಮಿಟೆಡ್, ಕೊಪ್ಪ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ ರವರ ಬಾಯ್ಲರ್ ಸಂಖ್ಯೆ: ಕೆಟಿಕೆ - 2637 ಅನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ದಿನಾಂಕ:11.4.2006 ರಿಂದ ದಿನಾಂಕ:30.5.2006ರವರೆಗೆ ಸದರಿ ಕಾಯ್ದೆಯ ಅಧಿನಿಯಮ 8 ರಿಂದ ವಿನಾಯಿತಿಯನ್ನು ನೀಡಿದೆ.

1. ಬಾಯ್ಲರನ್ನು ಗರಿಷ್ಠ 99.5 ಕೆ.ಜಿ.: ಚ.ಸೆಂ.ಮೀ.ಪರಿಮಿತಿಯಲ್ಲಿ ಚಾಲನೆ ಮಾಡುವುದು.
2. ಬಾಯ್ಲರಿನ ಗರಿಷ್ಠ ಎಂ.ಸಿ.ಆರ್.100 ಟನ್ : ಪ್ರತಿ ತಾಸಿಗೆ ಮೀರಬಾರದು.
3. ಬಾಯ್ಲರಿನ ಸೂಕ್ತ ಫೀಡ್ ವಾಟರ್ ಟ್ರೀಟ್‌ಮೆಂಟ್‌ನಿಂದ ನಿಗದಿತ ಫೀಡ್ ವಾಟರ್ ಹಾಗೂ ಬಾಯ್ಲರ್ ವಾಟರ್ ಪ್ಯಾರಾ ಮೀಟರ್‌ಗಳನ್ನು ನಿರ್ವಹಿಸುವುದು.
4. ಬಾಯ್ಲರನ್ನು ನಿಯಮಾನುಸಾರ ಪ್ರತಿ ಪಾಳಿಯಲ್ಲಿ ಬಾಯ್ಲರ್ ಆಪರೇಷನ್ ಇಂಜಿನಿಯ್ : ಬಾಯ್ಲರ್ ಅಟೆಂಡೆಂಟ್ ಮೂಲಕ ನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜಿ. ಮಲ್ಲಿಕಾರ್ಜುನಸ್ವಾಮಿ**

ಪಿ.ಆರ್. 873

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 34 ರಾಶಾಪು 2003, ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2006**

ಕರ್ನಾಟಕ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ಅಧಿನಿಯಮ, 1968 ಮತ್ತು ಕರ್ನಾಟಕ ಕೃಷಿ ಸಂಬಂಧಿ ಕೀಟಗಳು ರೋಗಗಳ ನಿಯಮಗಳು, 1971ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ಅಧಿನಿಯಮ, 1968 ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**



### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1969ರ ಅಧಿನಿಯಮ 1 :-** ಎಲ್ಲಾ ಬಗೆಯ ಕೃಷಿ ಬೆಳೆಗಳಿಗೆ ವಿವಿಧ ರೀತಿಯ ಕೀಟಗಳು ಮತ್ತು ಸಸ್ಯರೋಗಗಳು ತಗಲುತ್ತಿದ್ದು, ಅವುಗಳನ್ನು ತಡೆಗಟ್ಟದೆ ಇದ್ದರೆ ಬೆಳೆಯುತ್ತಿರುವ ಬೆಳೆಗಳಿಗೆ ಹಾನಿಯುಂಟಾಗಿ ಇಳುವರಿಯು ನಷ್ಟವಾಗುತ್ತದೆ. ಆದಕಾರಣ, ಅಂಥ ಕೀಟಗಳು ಮತ್ತು ರೋಗಗಳ ನಿಯಂತ್ರಣ ರಾಷ್ಟ್ರದ ಕೃಷಿ ಆರ್ಥಿಕತೆಯಲ್ಲಿ ಅತ್ಯಂತ ಪ್ರಮುಖವೆನಿಸುತ್ತದೆ ಮತ್ತು ಅದರಿಂದ ದೇಶಕ್ಕೆ ಭಾರಿ ನಷ್ಟವಾಗಬಹುದಾದಂಥ ಕೃಷಿ ಉತ್ಪನ್ನವನ್ನು ಗಣನೀಯವಾಗಿ ರಕ್ಷಿಸಲು ಸಾಧ್ಯವಾಗುತ್ತದೆ. ಕೀಟಗಳು ಮತ್ತು ರೋಗಗಳ ವಿರುದ್ಧ ಸರಿಯಾದ ಮತ್ತು ಪರಿಣಾಮಕಾರಿಯಾದ ಪ್ರತಿಬಂಧಕ ಮತ್ತು ನಿವಾರಕ ಕ್ರಮಗಳನ್ನು ಕೈಗೊಳ್ಳುವ ಉದ್ದೇಶದಿಂದ ಈ ಶಾಸನವನ್ನು ಪ್ರಸ್ತಾಪಿಸಲಾಗಿದೆ. ಪ್ರಸ್ತುತ, ಮುಂಬಯಿ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ಅಧಿನಿಯಮ, 1947, ಕೊಡಗು ಕೃಷಿ ಸಂಬಂಧೀ ಕೀಟಗಳು ಮತ್ತು ರೋಗಗಳ ಅಧಿನಿಯಮ, 1933, ಹೈದರಾಬಾದ ಕೃಷಿ ಸಂಬಂಧೀ ಕೀಟಗಳು ಮತ್ತು ರೋಗಗಳ ವಿನಿಯಮ, 1352 ಫಸಲಿ, ಮದ್ರಾಸು ವಿನಾಶಕಾರಿ ಕ್ರಿಮಿಗಳು ಮತ್ತು ಕೀಟಗಳ ಅಧಿನಿಯಮ, 1917 - ಇವುಗಳು ರಾಜ್ಯ ವಿವಿಧ ಪ್ರದೇಶಗಳಲ್ಲಿ ಜಾರಿಯಲ್ಲಿವೆ. ಈ ಅಧಿನಿಯಮಗಳ ಉಪಬಂಧಗಳು ಏಕರೂಪದಲ್ಲಿರುವುದಿಲ್ಲ ಮತ್ತು ಇಡೀ ರಾಜ್ಯಕ್ಕೆ ಏಕರೂಪದ ಕಾನೂನನ್ನು ಅನ್ವಯ ಮಾಡುವುದು ಅವಶ್ಯಕವಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ iv 2ಎ, ದಿನಾಂಕ 22.6.1967, ಪುಟ 93ರಲ್ಲಿ ಪ್ರಕಟಿಸಲಾಗಿದೆ).

## 1969ರ [1][ಕರ್ನಾಟಕ ಅಧಿನಿಯಮ][1] ಸಂ. 1

(1969ರ ಜನವರಿ ಇಪ್ಪತ್ತೂರನೇ ದಿನದಂದು [1][ಕರ್ನಾಟಕ ರಾಜಪತ್ರ][1]ದಲ್ಲಿ ಮೊದಲು ಪ್ರಕಟವಾಗಿದೆ)

# [1][ಕರ್ನಾಟಕ][1] ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ಅಧಿನಿಯಮ, 1968

(1969ರ ಜನವರಿ ಹತ್ತನೇ ದಿನದಂದು ರಾಜ್ಯಪಾಲರ ಒಪ್ಪಿಗೆಯನ್ನು ಪಡೆದಿದೆ)

**[1][ಕರ್ನಾಟಕ ರಾಜ್ಯ][1] ದಲ್ಲಿ ಬೆಳೆಗಳು, ಸಸ್ಯಗಳು ಅಥವಾ ಮರಗಳಿಗೆ ಅಪಾಯಕಾರಿ ಕೀಟಗಳು, ಸಸ್ಯರೋಗಗಳು ಮತ್ತು ಹಾನಿಕರ ಕಳೆಗಳು ಕಾಣಿಸಿಕೊಳ್ಳುವುದನ್ನು, ಹರಡುವುದನ್ನು ಅಥವಾ ಪುನಃ ಕಾಣಿಸಿಕೊಳ್ಳುವುದನ್ನು ತಡೆಗಟ್ಟುವ ಅಧಿನಿಯಮ.**

[1][ಕರ್ನಾಟಕ ರಾಜ್ಯ][1]ದೊಳಗೆ ಬೆಳೆಗಳು, ಸಸ್ಯಗಳು ಅಥವಾ ಮರಗಳಿಗೆ ಅಪಾಯಕಾರಿಯಾದ ಅಥವಾ ನೀರು ಸರಬರಾಜಿಗೆ ಅಥವಾ ಜಲಮಾರ್ಗಗಳಿಗೆ ತಡೆಯೊಡ್ಡುವ ಕೀಟಗಳು, ಸಸ್ಯ ರೋಗಗಳು ಮತ್ತು ಹಾನಿಕರ ಕಳೆಗಳು ಕಾಣಿಸಿಕೊಳ್ಳುವುದನ್ನು, ಹರಡುವುದನ್ನು ಅಥವಾ ಪುನಃ ಕಾಣಿಸಿಕೊಳ್ಳುವುದನ್ನು ತಡೆಗಟ್ಟಲು ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಷಯಗಳಿಗಾಗಿ ಉಪಬಂಧ ಕಲ್ಪಿಸಲು ಕ್ರಮಗಳನ್ನು ಕೈಗೊಳ್ಳುವುದು ವಿಹಿತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಹತ್ತೊಂಬತ್ತನೇ ವರ್ಷದಲ್ಲಿ [1][ಕರ್ನಾಟಕ][1] ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:-

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1]ಕೃಷಿ ಸಂಬಂಧಿ ಕೀಟಗಳ ಮತ್ತು ರೋಗಗಳ ಅಧಿನಿಯಮ, 1968 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1]ಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [2][ದಿನಾಂಕ][2]ದಂದು ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು.-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) "ಬಾಧಿತ ಪ್ರದೇಶ" ಎಂದರೆ, 3ನೇ ಪ್ರಕರಣದ ಮೇರೆಗೆ ಅಧಿಸೂಚನೆಯ ಮೂಲಕ ಬಾಧಿತ ಪ್ರದೇಶವೆಂದು ಘೋಷಿತವಾದ ಯಾವುದೇ ಪ್ರದೇಶ;

(2) "ಕೃಷಿ ನಿರ್ದೇಶಕರು" ಎಂದರೆ, ರಾಜ್ಯ ಸರ್ಕಾರದಿಂದ ಕೃಷಿ ನಿರ್ದೇಶಕರಾಗಿ ನೇಮಕಗೊಂಡ ಯಾರೇ ಅಧಿಕಾರಿ ಮತ್ತು ಇದು ತೋಟಗಾರಿಕಾ ನಿರ್ದೇಶಕರು ಮತ್ತು ಸಂದರ್ಭಾನುಸಾರ ಕೃಷಿ ನಿರ್ದೇಶಕರ ಅಥವಾ ತೋಟಗಾರಿಕಾ ನಿರ್ದೇಶಕರ ಹುದ್ದೆಯ ಕರ್ತವ್ಯಗಳನ್ನು ತತ್ಕಾಲದಲ್ಲಿ ನಿರ್ವಹಿಸುತ್ತಿರುವ ಪ್ರತಿಯೊಬ್ಬ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

(3) "ಕೃಷಿ ಉಪ-ನಿರ್ದೇಶಕರು" ಎಂದರೆ, ಜಿಲ್ಲೆಯ ಕೃಷಿ ಉಪ-ನಿರ್ದೇಶಕರು ಅಥವಾ ಜಿಲ್ಲೆಯ ತೋಟಗಾರಿಕಾ ಅಧಿಕಾರಿಯಾಗಿ ರಾಜ್ಯ ಸರ್ಕಾರದಿಂದ ನೇಮಕಗೊಂಡ ಅಧಿಕಾರಿ ಮತ್ತು ಸಂದರ್ಭಾನುಸಾರ, ಕೃಷಿ ಉಪ-ನಿರ್ದೇಶಕರ ಅಥವಾ ಜಿಲ್ಲಾ ತೋಟಗಾರಿಕಾ ಅಧಿಕಾರಿಯ ಕರ್ತವ್ಯಗಳನ್ನು ತತ್ಕಾಲದಲ್ಲಿ ನಿರ್ವಹಿಸುತ್ತಿರುವ ಪ್ರತಿಯೊಬ್ಬ ವ್ಯಕ್ತಿ;

(4) "ಪರಿಶೀಲನಾಧಿಕಾರಿ" ಎಂದರೆ, 17ನೇ ಪ್ರಕರಣದ ಮೇರೆಗೆ ನೇಮಕಗೊಂಡ ಅಧಿಕಾರಿ;

(5) "ಅಧಿಸೂಚನೆ" ಎಂದರೆ, ರಾಜ್ಯಪತ್ರದಲ್ಲಿ ಪ್ರಕಟಿಸಿದ ಅಧಿಸೂಚನೆ;

(6) "ಅಧಿಸೂಚಿತ ಪ್ರದೇಶ" ಎಂದರೆ 3ನೇ ಪ್ರಕರಣದ ಮೇರೆಗೆ ಯಾವ ಪ್ರದೇಶಕ್ಕೆ ಸಂಬಂಧಪಟ್ಟಂತೆ ಅಧಿಸೂಚನೆಯನ್ನು ಹೊರಡಿಸಲಾಗಿದೆಯೋ ಆ ಪ್ರದೇಶ;

(7) "ಹಾನಿಕರ ಕಳೆ" ಎಂದರೆ, 3ನೇ ಪ್ರಕರಣದ ಮೇರೆಗೆ ಅಧಿಸೂಚನೆಯ ಮೂಲಕ ಹಾನಿಕರ ಕಳೆಯೆಂದು ಘೋಷಿಸಲಾದ ಯಾವುದೇ ಕಳೆ;

(8) "ಅಧಿಭೋಗದಾರ" ಎಂದರೆ, ಯಾವುದೇ ಭೂಮಿಯ, ಆವರಣದ ಅಥವಾ ನೀರಿನ ಅಧಿಭೋಗದ ಹಕ್ಕನ್ನು ತತ್ಕಾಲದಲ್ಲಿ ಹೊಂದಿರುವ ವ್ಯಕ್ತಿ, ಅಥವಾ ಭೂಮಿಯ, ಆವರಣದ ಅಥವಾ ನೀರಿನ ವಾಸ್ತವಿಕ ಅಧಿಭೋಗದಲ್ಲಿರುವ ಅವನ ಅಧಿಕೃತ ಏಜೆಂಟ್ ಅಥವಾ ಯಾರೇ ವ್ಯಕ್ತಿ ಮತ್ತು ಇದು ಅಂಥ ಅಧಿಭೋಗದ ಹಕ್ಕನ್ನು ಹೊಂದಿರುವ ಅಥವಾ ಅಂಥ ವಾಸ್ತವಿಕ ಅಧಿಭೋಗದಲ್ಲಿರುವ ಸ್ಥಳೀಯ ಪ್ರಾಧಿಕಾರವನ್ನು ಒಳಗೊಳ್ಳುತ್ತದೆ;

(9) "ಪರೋಪಜೀವಿ" ಎಂದರೆ, 3ನೇ ಪ್ರಕರಣದ ಮೇರೆಗೆ ಅಧಿಸೂಚನೆಯ ಮೂಲಕ ಪರೋಪಜೀವಿಯೆಂದು ಘೋಷಿಸಲಾದ ಮತ್ತು ಯಾವುದೇ ಕೃಷಿಬೆಳೆ, ಸಸ್ಯ, ಮರ, ಪೊದೆ ಅಥವಾ ಗಿಡಮೂಲಿಕೆಯ ಮೇಲೆ ಪೂರ್ಣವಾಗಿ ಅಥವಾ ಭಾಗಶಃ ಜೀವಿಸುತ್ತಿರುವ ಯಾವುದೇ ಸಸ್ಯ ಅಥವಾ ಪ್ರಾಣಿ;

(10) "ಕೀಟ" ಎಂದರೆ, 3ನೇ ಪ್ರಕರಣದ ಮೇರೆಗೆ ಅಧಿಸೂಚನೆಯ ಮೂಲಕ ಕೀಟವೆಂದು ಘೋಷಿತವಾಗಿರುವ ಯಾವುದೇ ಕ್ರಿಮಿ ಅಥವಾ ಕಶೇರುಕ ಅಥವಾ ಅಕಶೇರುಕ ಪ್ರಾಣಿ;

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1-11-1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ಅಧಿನಿಯಮವು 13.10.1971 ರಿಂದ ಅಧಿಸೂಚನೆಯ ಮೂಲಕ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು 6ನೇ ಪುಟದಲ್ಲಿ ಇದೆ.

(11) "ಸಸ್ಯ" ಎಂಬುದರಲ್ಲಿ ಎಲ್ಲಾ ತೋಟಗಾರಿಕೆಯ ಅಥವಾ ಕೃಷಿ ಬೆಳೆಗಳು, ಮರಗಳು, ಪೊದೆಗಳು ಅಥವಾ ಗಿಡಮೂಲಿಕೆಗಳು ಒಳಗೊಳ್ಳುತ್ತವೆ ಮತ್ತು ಹಣ್ಣು, ಎಲೆ, ಕಾಂಡ, ಬೇರು, ತೊಗಟೆ ಅಥವಾ ಕತ್ತರಿಸಿದ ಸಸ್ಯಭಾಗ ಅಥವಾ ಅದರ ಯಾವುದೇ ಭಾಗವನ್ನು ಒಳಗೊಳ್ಳುತ್ತದೆ. ಆದರೆ, ಅದು ಬೀಜವನ್ನು ಒಳಗೊಳ್ಳುವುದಿಲ್ಲ:

ಪರಂತು, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಯಾವುದೇ ನಿರ್ದಿಷ್ಟ ಸಸ್ಯದ ಬೀಜವನ್ನು ಸಸ್ಯವೆಂದು ಭಾವಿಸತಕ್ಕದ್ದೆಂದು ನಿರ್ದೇಶಿಸಬಹುದು;

(12) "ಸಸ್ಯರೋಗ" ಎಂದರೆ, ಯಾವುದೇ ಶಿಲೀಂದ್ರ, ಬ್ಯಾಕ್ಟೀರಿಯಲ್, ವೈರಸ್, ಸಸ್ಯಸಂಬಂಧಿ ರೋಗಾಣುಜೀವಿ, ಪರೋಪಜೀವಿ ರೋಗ ಅಥವಾ 3ನೇ ಪ್ರಕರಣದ ಮೇರೆಗೆ ಅಧಿಸೂಚನೆಯ ಮೂಲಕ ಸಸ್ಯರೋಗವೆಂದು ಘೋಷಿತವಾದ ಯಾವುದೇ ಇತರ ರೋಗ;

(13) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು.

**3. ಕೀಟಗಳು, ಸಸ್ಯರೋಗಗಳು ಅಥವಾ ಹಾನಿಕರ ಕಳೆಗಳಿಂದ ಬಾಧಿತವಾದ ಪ್ರದೇಶಗಳ ಬಗ್ಗೆ ರಾಜ್ಯ ಸರ್ಕಾರದ ಅಧಿಸೂಚನೆ.-** ಯಾವುದೇ ಪ್ರದೇಶದಲ್ಲಿ ಸಸ್ಯಗಳಿಗೆ ಯಾವುದೇ ರೋಗ, ಕೀಟ, ಪರೋಪಜೀವಿ ಅಥವಾ ಕಳೆಯು ಅಪಾಯಕಾರಿಯೆಂದು ಮತ್ತು ಅಂಥ ರೋಗ, ಪರೋಪಜೀವಿ, ಕೀಟ ಅಥವಾ ಕಳೆಯನ್ನು ನಿರ್ಮೂಲಮಾಡಲು, ಅಥವಾ ಅವುಗಳು ಕಾಣಿಸಿಕೊಳ್ಳುವುದನ್ನು, ಹರಡುವುದನ್ನು ಅಥವಾ ಪುನಃ ಕಾಣಿಸಿಕೊಳ್ಳುವುದನ್ನು ತಡೆಗಟ್ಟಲು ಕ್ರಮಗಳನ್ನು ಕೈಗೊಳ್ಳುವ ಅಗತ್ಯವಿದೆಯೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಲ್ಲಿ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಗಾಗಿ ಅಂಥ ಪ್ರದೇಶವನ್ನು ಬಾಧಿತ ಪ್ರದೇಶವೆಂದು ಘೋಷಿಸಬಹುದು; ಮತ್ತು ಅಂಥ ಪ್ರದೇಶಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ಅಂಥ ಅಧಿಸೂಚನೆಯ ಮೂಲಕ,-

(ಎ) ಈ ಅಧಿನಿಯಮದ ಉದ್ದೇಶಗಳಿಗಾಗಿ, ಯಾವುದೇ ರೋಗ, ಪರೋಪಜೀವಿ, ಕೀಟ ಅಥವಾ ಕಳೆಯನ್ನು ಸಸ್ಯರೋಗ, ಪರೋಪಜೀವಿ, ಕೀಟ ಅಥವಾ ಹಾನಿಕರ ಕಳೆಯೆಂದು ಸಹ ಘೋಷಿಸಬಹುದು;

(ಬಿ) ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಯಾವುದೇ ಸಸ್ಯ, ಮಣ್ಣು ಅಥವಾ ಗೊಬ್ಬರವನ್ನು ಸಾಗಿಸುವುದು ಅಥವಾ ಅಲ್ಲಿಂದ ಅದನ್ನು ತೆಗೆದುಹಾಕುವುದನ್ನು ನಿಷೇಧಿಸಬಹುದು ಅಥವಾ ನಿರ್ಬಂಧಿಸಬಹುದು ಅಥವಾ ಅಂಥ ಕೀಟ, ರೋಗ ಅಥವಾ ಕಳೆಯ ಸಂಬಂಧದಲ್ಲಿ ಅವಶ್ಯವಿರಬಹುದಾದಂಥ ಇತರ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು ಸಹ ನಿಯಮಿಸಬಹುದು;

(ಸಿ) ಯಾವುದೇ ಹಾನಿಕರ ಕಳೆ, ಪರೋಪಜೀವಿ, ಕೀಟ ಅಥವಾ ಸಸ್ಯರೋಗವು ಕಾಣಿಸಿಕೊಳ್ಳುವುದನ್ನು, ಹರಡುವುದನ್ನು ಅಥವಾ ಪುನಃ ಕಾಣಿಸಿಕೊಳ್ಳುವುದನ್ನು ನಿವಾರಿಸಲು, ನಾಶಪಡಿಸಲು ಅಥವಾ ತಡೆಗಟ್ಟಲು ನಿರ್ದಿಷ್ಟಪಡಿಸಬಹುದಾದಂಥ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು ಕೈಗೊಳ್ಳತಕ್ಕದ್ದೆಂದು ಸಹ ನಿರ್ದೇಶಿಸಬಹುದು;

(ಡಿ) ನಿರ್ದಿಷ್ಟಪಡಿಸಲಾದ ಪ್ರದೇಶದಲ್ಲಿ ಇತರ ಬೆಳೆಗಳಿಗೆ ಹಾನಿಯುಂಟುಮಾಡುವ ಸಂಭವವಿರುವ, ಯಾವುದೇ ಸಸ್ಯ ನೆಡುವುದನ್ನು ಅಥವಾ ಬೆಳೆಯುವುದನ್ನು ಸಹ ನಿರ್ದಿಷ್ಟಪಡಿಸಬಹುದಾದ ಪ್ರದೇಶದೊಳಗೆ ನಿಷೇಧಿಸಬಹುದು.

**4. ನಿರ್ದೇಶನಗಳನ್ನು ನೀಡುವ ಅಧಿಕಾರ.-** 3ನೇ ಪ್ರಕರಣದ ಮೇರೆಗೆ ಅಧಿಸೂಚನೆ ಹೊರಡಿಸಿದ ಮೇಲೆ ಕೃಷಿ ಉಪ-ನಿರ್ದೇಶಕರು ನೋಟೀಸಿನ ಮೂಲಕ,-

(i) ಯಾವುದೇ ಸಸ್ಯರೋಗ, ಕೀಟ, ಪರೋಪಜೀವಿ ಅಥವಾ ಹಾನಿಕರ ಕಳೆಯು ಕಾಣಿಸಿಕೊಳ್ಳುವುದನ್ನು, ಹರಡುವುದನ್ನು ಅಥವಾ ಪುನಃ ಕಾಣಿಸಿಕೊಳ್ಳುವುದನ್ನು ನಿವಾರಿಸಲು, ನಾಶಪಡಿಸಲು ಅಥವಾ ತಡೆಗಟ್ಟಲು ನೋಟೀಸಿನಲ್ಲಿ ತಾನು ನಿರ್ದಿಷ್ಟಪಡಿಸಬಹುದಾದಂಥ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು (ರೋಗ ಪೀಡಿತವಾದ ಅಥವಾ ರೋಗ ತಗಲುವ ಸಂಭವವಿರುವ ಸಸ್ಯಗಳನ್ನು ಕಿತ್ತುಹಾಕುವುದು ಅಥವಾ ನಾಶ ಪಡಿಸುವುದೂ ಸೇರಿದಂತೆ) ಜಾರಿಗೆ ತರುವಂತೆ ಬಾಧಿತ ಪ್ರದೇಶದೊಳಗಿನ ಪ್ರತಿಯೊಬ್ಬ ಅಧಿಭೋಗದಾರನಿಗೆ ನಿರ್ದೇಶನ ನೀಡಬಹುದು.

(ii) ಹದಿನೆಂಟು ವರ್ಷಗಳಿಗಿಂತ ಕಡಿಮೆ ವಯಸ್ಸಿನವನಲ್ಲದ ಮತ್ತು ಸದರಿ ಪ್ರದೇಶದೊಳಗೆ ವಾಸಿಸುತ್ತಿರುವ ಯಾರೇ ವ್ಯಕ್ತಿಯನ್ನು (1)ನೇ ಖಂಡದಲ್ಲಿ ಉಲ್ಲೇಖಿಸಲಾದ ಕ್ರಮಗಳನ್ನು ಜಾರಿಗೆ ತರಲು ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನೆರವನ್ನು ನೀಡುವಂತೆ ಕೋರಬಹುದು:

ಪರಂತು,-

(ಎ) ಒಮ್ಮೆಗೆ ಏಳು ದಿನಗಳನ್ನು ಮೀರುವ ಪೂರ್ಣಾವಧಿ ಸೇವೆಯನ್ನು ಸಲ್ಲಿಸಲು ಅಧಿಭೋಗದಾರನಲ್ಲದ ಯಾರೇ ವ್ಯಕ್ತಿಯನ್ನು ಕೋರತಕ್ಕದ್ದಲ್ಲ ಮತ್ತು ಯಾರೇ ವ್ಯಕ್ತಿಯು ಈಗಾಗಲೇ ಅಂಥ ಸೇವೆಯನ್ನು ಸಲ್ಲಿಸಿದ್ದರೆ, ಆ ತರುವಾಯ ಪೂರ್ಣಾವಧಿ ಸೇವೆ ಸಲ್ಲಿಸುವುದಕ್ಕೆ ಅವನನ್ನು ಕೋರುವ ಮೊದಲು ತೊಂಭತ್ತು ದಿನಗಳಿಗಿಂತ ಕಡಿಮೆಯಿಲ್ಲದ ಮಧ್ಯಂತರವಿರತಕ್ಕದ್ದು; ಮತ್ತು

(ಬಿ) ವೃದ್ಧಾಪ್ಯದ ಕಾರಣದಿಂದಾಗಿ, ದೈಹಿಕ ಅಸಮರ್ಥತೆ ಅಥವಾ ಇತರ ಯಾವುದೇ ಯುಕ್ತ ಕಾರಣದಿಂದಾಗಿ, ನೆರವು ನೀಡಲು ಅಸಮರ್ಥನಾಗಿರುವ ಅಥವಾ ಸಹಾಯವನ್ನು ನೀಡುವ ಉದ್ದೇಶಕ್ಕಾಗಿ ಇರಬೇಕೆಂದು ಅಗತ್ಯಪಡಿಸಲಾದ ಸ್ಥಳದಿಂದ 8 ಕಿ.ಮೀ. ಗಿಂತ ಹೆಚ್ಚು ದೂರದಲ್ಲಿ ವಾಸಿಸುತ್ತಿರುವ ಯಾರೇ ವ್ಯಕ್ತಿಯನ್ನು ಅಂಥ ನೆರವು ನೀಡುವಂತೆ ಕೋರತಕ್ಕದ್ದಲ್ಲ; ಮತ್ತು

(iii) (i)ನೇ ಖಂಡದಲ್ಲಿ ಉಲ್ಲೇಖಿಸಲಾದ ಕ್ರಮಗಳನ್ನು ಯಾವ ಪ್ರದೇಶದೊಳಗೆ ಮತ್ತು ಯಾವ ಅವಧಿಯೊಳಗೆ ಕಾರ್ಯಗತಗೊಳಿಸಬೇಕೆಂದು ನಿರ್ದಿಷ್ಟಪಡಿಸಬಹುದು.

(2) (1)ನೇ ಉಪ-ಪ್ರಕರಣದ (i)ನೇ ಖಂಡದ ಮೇರೆಗೆ ಪ್ರತಿಯೊಬ್ಬ ಅಧಿಭೋಗದಾರನಿಗೆ ಅಥವಾ ಸದರಿ ಉಪ-ಪ್ರಕರಣದ (ii)ನೇ ಖಂಡದ ಮೇರೆಗೆ ಯಾರ ನೆರವನ್ನು ಅಗತ್ಯಪಡಿಸಲಾಗಿದೆಯೋ ಆ ಪ್ರತಿಯೊಬ್ಬ ಇತರ ವ್ಯಕ್ತಿಗೆ ತಿಳಿಸುವುದು ಅಗತ್ಯವಾಗಿರತಕ್ಕದ್ದಲ್ಲ ಮತ್ತು ಆ

ಪ್ರದೇಶ, ಗ್ರಾಮ ಅಥವಾ ಸ್ಥಳದಲ್ಲಿ ಡಂಗುರ ಹೊಡೆಸುವ ಮೂಲಕ ಅಥವಾ ಇತರ ರೂಢಿಗತ ಪದ್ಧತಿಯ ಮೂಲಕ ಮಾಡಿದ ಘೋಷಣೆಯು ಆ ಪ್ರದೇಶ, ಗ್ರಾಮ ಅಥವಾ ಸ್ಥಳದಲ್ಲಿ ವಾಸಿಸುತ್ತಿರುವ ಎಲ್ಲಾ ಬಾಧಿತ ವ್ಯಕ್ತಿಗಳಿಗೆ ನೀಡಿದ ಸಾಕಷ್ಟು ತಿಳಿವಳಿಕೆಯೆಂದು ಭಾವಿಸತಕ್ಕದ್ದು.

**5. 4ನೇ ಪ್ರಕರಣದ ಮೇರೆಗೆ ನೋಟೀಸು ಜಾರಿಯಾದ ಮೇಲೆ ಅಧಿಭೋಗದಾರನ ಕರ್ತವ್ಯಗಳು.-** 4ನೇ ಪ್ರಕರಣದ ಮೇರೆಗೆ ನೋಟೀಸು ಜಾರಿಯಾದ ಮೇಲೆ,-

(i) ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು ಕಾರ್ಯಗತಗೊಳಿಸುವುದು ಬಾಧಿತ ಪ್ರದೇಶದಲ್ಲಿ ವಾಸಿಸುವ ಪ್ರತಿಯೊಬ್ಬ ಅಧಿಭೋಗದಾರನ ಕರ್ತವ್ಯವಾಗಿರತಕ್ಕದ್ದು; ಮತ್ತು

(ii) ನೋಟೀಸಿನಲ್ಲಿ ನಿರ್ದಿಷ್ಟಪಡಿಸಿರುವಂಥ ರೀತಿಯಲ್ಲಿ ನೆರವು ನೀಡುವುದು ಸದರಿ ಪ್ರದೇಶದೊಳಗೆ ವಾಸಿಸುವ ಪ್ರತಿಯೊಬ್ಬನ ಕರ್ತವ್ಯವಾಗಿರತಕ್ಕದ್ದು.

**6. ಭೂಮಿ ಅಥವಾ ಆವರಣಗಳನ್ನು ಪ್ರವೇಶಿಸಲು ಅಧಿಕಾರ.-** ಪರಿಶೀಲನಾ ಅಧಿಕಾರಿಯು, ಅಧಿಭೋಗದಾರ ಅಥವಾ ಪ್ರಭಾರದಲ್ಲಿರುವ ಇತರ ವ್ಯಕ್ತಿಗೆ ಯುಕ್ತ ನೋಟೀಸನ್ನು ನೀಡಿದ ತರುವಾಯ, ಅಧಿಸೂಚಿತ ಪ್ರದೇಶದಲ್ಲಿನ ಯಾವುದೇ ಭೂಮಿ, ನೀರು ಅಥವಾ ಆವರಣದೊಳಗೆ-

(i) ಅಂಥ ಭೂಮಿ, ನೀರು ಅಥವಾ ಆವರಣದ ಮೇಲೆ ಯಾವುದೇ ಹಾನಿಕರ ಕಳೆ, ಪರೋಪಜೀವಿ, ಕೀಟ ಅಥವಾ ಸಸ್ಯರೋಗ ಇವೆಯೇ ಅಥವಾ ಇಲ್ಲವೇ ಎಂಬುದನ್ನು; ಮತ್ತು

(ii) ಕಾರ್ಯಗತಗೊಳಿಸಬೇಕೆಂದು ನಿರ್ದೇಶಿಸಲಾದ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು ಕಾರ್ಯಗತಗೊಳಿಸಲಾಗಿದೆಯೆ ಅಥವಾ ಇಲ್ಲವೇ

- ಎಂಬುದನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ ಪ್ರವೇಶಿಸಬಹುದು.

**7. ಸಸ್ಯಗಳನ್ನು ಕಿತ್ತುಹಾಕುವುದು ಅಥವಾ ನಾಶಗೊಳಿಸುವುದೂ ಸೇರಿದಂತೆ ಕೀಟಗಳು ಅಥವಾ ಸಸ್ಯರೋಗಗಳನ್ನು ನಿರ್ಮೂಲನಗೊಳಿಸಲು ನಿಯಮಿಸಲಾದ ಕ್ರಮಗಳಿರುವಲ್ಲಿ ಪ್ರಕ್ರಿಯೆ.-** 3ನೇ ಪ್ರಕರಣದ ಮೇರೆಗಿನ ಅಧಿಸೂಚನೆಯ ಮೂಲಕ ಕಾರ್ಯಗತಗೊಳಿಸಬೇಕೆಂದು ನಿರ್ದೇಶಿಸಲಾದ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳಲ್ಲಿ, ಯಾವುದೇ ಕೀಟಗಳು ಅಥವಾ ಸಸ್ಯರೋಗಗಳು ಕಾಣಿಸಿಕೊಳ್ಳುವುದನ್ನು ಅಥವಾ ಪುನಃ ಕಾಣಿಸಿಕೊಳ್ಳುವುದನ್ನು ನಿವಾರಿಸುವ ಅಥವಾ ತಡೆಗಟ್ಟುವ ದೃಷ್ಟಿಯಿಂದ ಯಾವುದೇ ಸಸ್ಯವನ್ನು ಕಿತ್ತುಹಾಕುವುದು ಅಥವಾ ನಾಶಗೊಳಿಸುವುದೂ ಸೇರಿರುವಲ್ಲಿ ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಲಾದ ದಿನಾಂಕದಂದು ಅಥವಾ ಅದಕ್ಕೂ ಮುಂಚೆ ಅಂಥ ಸಸ್ಯವನ್ನು ಕಿತ್ತುಹಾಕಲು ಅಥವಾ ನಾಶಗೊಳಿಸಲು ತಪ್ಪುವ ಯಾರೇ ಅಧಿಭೋಗದಾರನನ್ನು ಈ ಅಧಿನಿಯಮದ ಮೇರೆಗೆ ಅಪರಾಧ ಮಾಡಿದ್ದಾನೆಂದು ಭಾವಿಸತಕ್ಕದ್ದು ಮತ್ತು ಅಂಥ ಸಸ್ಯವನ್ನು ಕಿತ್ತುಹಾಕುವ ಅಥವಾ ನಾಶಪಡಿಸುವ ಕಾರ್ಯವನ್ನು ಪರಿಶೀಲನಾ ಅಧಿಕಾರಿಯು ಮಾಡಬಹುದು ಅಥವಾ ಅವನ ಮೇಲ್ವಿಚಾರಣೆಯಲ್ಲಿ ಅದನ್ನು ಕಾರ್ಯಗತಗೊಳಿಸಬಹುದು.

**8. ಪರಿಹಾರ ಅಥವಾ ಪ್ರತಿಬಂಧಕ ಕ್ರಮ ಕೈಗೊಳ್ಳುವುದಕ್ಕೆ ಅಧಿಭೋಗದಾರನಿಗೆ ನೋಟೀಸು.-** (1) ಯಾವುದೇ ಭೂಮಿ, ನೀರು ಅಥವಾ ಆವರಣವನ್ನು ಪರಿಶೀಲನೆ ಮಾಡಿದ ತರುವಾಯ, 3ನೇ ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಪ್ರತಿಬಂಧ ಅಥವಾ ಪರಿಹಾರ ಕ್ರಮಗಳನ್ನು ನಿರ್ದೇಶಿಸಲಾದಂತೆ ಕಾರ್ಯಗತಗೊಳಿಸಲಾಗಿಲ್ಲವೆಂದು ಪರಿಶೀಲನಾಧಿಕಾರಿಗೆ ಕಂಡುಬಂದಲ್ಲಿ, ಪರಿಶೀಲನಾಧಿಕಾರಿಯು, ನಿಯಮಿಸಲಾದ ಅಧಿಕಾರಿಯ ಯಾವುದೇ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು ಅಂಥ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ, ನಿರ್ದೇಶಿಸಲಾದ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು ಕಾರ್ಯಗತಗೊಳಿಸುವಂತೆ ಲಿಖಿತ ನೋಟೀಸಿನ ಮೂಲಕ ಅಧಿಭೋಗದಾರನಿಗೆ ತಿಳಿಸಬಹುದು.

(2) ಅಧಿಭೋಗದಾರನು, ತನಗೆ ಅಂಥ ನೋಟೀಸು ಜಾರಿಯಾದ 7 ದಿನಗಳೊಳಗೆ ನಿಯಮಿಸಲಾದ ಅಧಿಕಾರಿಗೆ ಅಪೀಲು ಸಲ್ಲಿಸಬಹುದು.

(3) (2)ನೇ ಉಪ-ಪ್ರಕರಣದ ಮೇರೆಗಿನ ಅಪೀಲನ್ನು ಸ್ವೀಕರಿಸಿದ ಮೇಲೆ ನಿಯಮಿಸಲಾದ ಅಧಿಕಾರಿಯು, ಅಪೀಲುದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ, ಅದರ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಅಂಥ ಆದೇಶದ ಕಾರಣದಿಂದಾಗಿ ಅಪೀಲುದಾರನು ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು ಕಾರ್ಯಗತಗೊಳಿಸಬೇಕಾಗಿರುವಲ್ಲಿ, ಅಂಥ ಕ್ರಮಗಳನ್ನು ಯಾವ ಸಮಯದೊಳಗೆ ಕಾರ್ಯಗತಗೊಳಿಸತಕ್ಕದ್ದೆಂಬುದನ್ನು ಸಹ ಆ ಆದೇಶದಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

(4) 3ನೇ ಪ್ರಕರಣದ ಮೇರೆಗೆ ಹೊರಡಿಸಿದ ಆದೇಶವು ಅಂತಿಮ ಮತ್ತು ನಿರ್ಣಾಯಕ ವಾಗಿರತಕ್ಕದ್ದು ಮತ್ತು ಅದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ.

**9. ಅಧಿಭೋಗದಾರನು ತನ್ನ ಮೇಲೆ ಜಾರಿಮಾಡಿದ ನೋಟೀಸನ್ನು ಪಾಲಿಸಲು ತಪ್ಪುವುದು ಒಂದು ಅಪರಾಧ ಮಾಡಿದಂತಾಗುವುದು.-** 8ನೇ ಪ್ರಕರಣದ ಮೇರೆಗೆ ಯಾವ ಅಧಿಭೋಗದಾರನ ಮೇಲೆ ನೋಟೀಸನ್ನು ಜಾರಿಮಾಡಲಾಗಿದೆಯೋ, ಆ ಯಾರೇ ಅಧಿಭೋಗದಾರನು ಪರಿಶೀಲನಾ ಅಧಿಕಾರಿಯು ನಿರ್ದಿಷ್ಟಪಡಿಸಿದ ಕಾಲದೊಳಗೆ ನೋಟೀಸನ್ನು ಪಾಲಿಸಲು ತಪ್ಪಿದರೆ ಅಥವಾ ಅಪೀಲನ್ನು ಸಲ್ಲಿಸಿದ್ದು, ನಿರ್ದಿಷ್ಟಪಡಿಸಿದ ಕಾಲದೊಳಗೆ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು ಪಾಲಿಸುವಂತೆ ಅಪೀಲು ಆದೇಶವು ಅಗತ್ಯಪಡಿಸಿರುವ ಸಂದರ್ಭಗಳಲ್ಲಿ, ಅಂಥ ಕಾಲದೊಳಗೆ ಅಂಥ ಕ್ರಮಗಳನ್ನು ಕಾರ್ಯಗತಗೊಳಿಸಲು ತಪ್ಪಿದರೆ, ಈ ಅಧಿನಿಯಮದ ಮೇರೆಗೆ ಅವನು ಅಪರಾಧ ಮಾಡಿದ್ದಾನೆಂದು ಭಾವಿಸತಕ್ಕದ್ದು ಮತ್ತು ಕಾರ್ಯಗತಗೊಳಿಸಬೇಕೆಂದು ನಿರ್ದೇಶಿಸಲಾದ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳನ್ನು ಪರಿಶೀಲನಾಧಿಕಾರಿಯು ತಾನೇ ಅಥವಾ ತನ್ನ ಮೇಲ್ವಿಚಾರಣೆಯಲ್ಲಿ ಕಾರ್ಯಗತಗೊಳಿಸಬಹುದು.

**10. ವೆಚ್ಚಗಳ ವಸೂಲಿ.–** ಪರಿಶೀಲನಾಧಿಕಾರಿಯು ತಾನೇ ಅಥವಾ ತನ್ನ ಮೇಲ್ವಿಚಾರಣೆಯಲ್ಲಿ, 7ನೇ ಪ್ರಕರಣದ ಅಥವಾ 9ನೇ ಪ್ರಕರಣದ ಮೇರೆಗೆ ಕಾರ್ಯಗತಗೊಳಿಸಿದ ಯಾವುದೇ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳ ವೆಚ್ಚವನ್ನು ಅಧಿಭೋಗದಾರನಿಂದ ಭೂಕಂದಾಯದ ಬಾಕಿಯಂತೆ ವಸೂಲುಮಾಡತಕ್ಕದ್ದು.

**11. ವೆಚ್ಚಗಳ ವಿರುದ್ಧ ಅಪೀಲು.–** 10ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಯಾರೇ ಅಧಿಭೋಗದಾರನು,-

(i) ಆ ವೆಚ್ಚಗಳಲ್ಲಿ ಕಾರ್ಮಿಕ, ಸಾಮಗ್ರಿ ಅಥವಾ ಉಪಕರಣಗಳ ಬಳಕೆಯ ವೆಚ್ಚಗಳನ್ನು ಹೊರತುಪಡಿಸಿದ ಇತರ ಬಾಬುಗಳ ವೆಚ್ಚಗಳು ಒಳಗೊಂಡಿದೆ;

(ii) ಕಾರ್ಮಿಕ, ಸಾಮಗ್ರಿಯ ಅಥವಾ ಉಪಕರಣಗಳ ಬಳಕೆಯ ವೆಚ್ಚಗಳು ಅನುಚಿತವಾಗಿ ಹೆಚ್ಚಾಗಿವೆ ಅಥವಾ ವಾಸ್ತವಿಕವಾಗಿ ಮಾಡಿದ ಖರ್ಚಿಗಿಂತ ಹೆಚ್ಚಾಗಿದೆ;

- ಎಂಬ ಕಾರಣಗಳ ಮೇಲೆ ಅಂಥ ವೆಚ್ಚಗಳನ್ನು ಸಂದಾಯ ಮಾಡುವಂತೆ ಮೊದಲು ತಗಾದೆಮಾಡಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ನಿಯಮಿಸಲಾದ ಅಧಿಕಾರಿಗೆ ಅಪೀಲು ಸಲ್ಲಿಸಬಹುದು.

(2) (1)ನೇ ಉಪ-ಪ್ರಕರಣದ ಮೇರೆಗೆ ಅಪೀಲನ್ನು ಸ್ವೀಕರಿಸಿದ ಮೇಲೆ, ನಿಯಮಿಸಲಾದ ಅಧಿಕಾರಿಯು ಅಧಿಭೋಗದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ತರುವಾಯ, ಅದರ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಹೊರಡಿಸಬಹುದು.

(3) (2)ನೇ ಉಪ-ಪ್ರಕರಣದ ಮೇರೆಗೆ ಹೊರಡಿಸಿದ ಆದೇಶವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು ಮತ್ತು ಅದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ.

**12. ಕ್ರಿಮಿ, ಕೀಟಗಳು, ಸಸ್ಯರೋಗಗಳು ಅಥವಾ ಹಾನಿಕರ ಕಳೆಗಳ ಬಗ್ಗೆ ವರದಿ ಮಾಡುವುದು ಗ್ರಾಮಾಧಿಕಾರಿಗಳ ಹೊಣೆ.–** ಕ್ರಿಮಿ ಕೀಟ, ಸಸ್ಯರೋಗ ಅಥವಾ ಹಾನಿಕರ ಕಳೆಯನ್ನು ಹೋಲುವ ಕೀಟಗಳು, ರೋಗಗಳು ಅಥವಾ ಹಾನಿಕರ ಕಳೆಯು ಯಾವ ಅಧಿಸೂಚಿತ ಪ್ರದೇಶದ ಪರಿಮಿತಿಯೊಳಗೆ ಕಂಡುಬರುವುದೋ ಆ ಅಧಿಸೂಚಿತ ಪ್ರದೇಶದ ಪಕ್ಕದಲ್ಲಿರುವ ಗ್ರಾಮದ ಪ್ರತಿಯೊಬ್ಬ ಗ್ರಾಮಾಧಿಕಾರಿಯು ಈ ಸಂಬಂಧ ರಾಜ್ಯ ಸರ್ಕಾರವು, ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಿಗಳಿಗೆ ಅದನ್ನು ವರದಿ ಮಾಡತಕ್ಕದ್ದು.

ವಿವರಣೆ.– ಈ ಪ್ರಕರಣದ ಉದ್ದೇಶಗಳಿಗಾಗಿ, **"ಗ್ರಾಮಾಧಿಕಾರಿ"** ಎಂಬ ಪದವು ಗ್ರಾಮಲೆಕ್ಕಿಗ, ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಮತ್ತು ಗ್ರಾಮ ಸೇವಕ ಇವರನ್ನು ಒಳಗೊಳ್ಳುತ್ತದೆ.

**13. ದಂಡಗಳು.–** 3ನೇ ಪ್ರಕರಣದ ಮೇರೆಗೆ ಹೊರಡಿಸಿದ ಅಧಿಸೂಚನೆಯಲ್ಲಿ ಹೇಳಿದ ಯಾವುದೇ ನಿಷೇಧ, ನಿರ್ಬಂಧ ಅಥವಾ ನಿರ್ದೇಶನವನ್ನು ಉಲ್ಲಂಘಿಸುವ ಯಾರೇ ಆಗಲಿ ಅಪರಾಧ ನಿರ್ಣಯವಾದ ಮೇಲೆ ಐವತ್ತು ರೂಪಾಯಿಗಳವರೆಗಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(2) ಈ ಅಧಿನಿಯಮದ 7ನೇ ಪ್ರಕರಣ ಅಥವಾ 9ನೇ ಪ್ರಕರಣದ ಮೇರೆಗೆ ಅಪರಾಧ ಮಾಡಿದ್ದಾನೆಂದು ಭಾವಿಸಲಾಗುವ ಯಾರೇ ಅಧಿಭೋಗದಾರನನ್ನು, ಅಪರಾಧ ನಿರ್ಣಯವಾದ ಮೇಲೆ, ಐವತ್ತು ರೂಪಾಯಿಗಳವರೆಗಿನ ಜುಲ್ಮಾನೆಯಿಂದ ದಂಡಿಸತಕ್ಕದ್ದು.

(3) 20ನೇ ಪ್ರಕರಣದ ಮೇರೆಗೆ ರಚಿಸಿದ ಯಾವುದೇ ನಿಯಮದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ಆಗಲಿ ಅಪರಾಧ ನಿರ್ಣಯವಾದ ಮೇಲೆ ಐವತ್ತು ರೂಪಾಯಿವರೆಗಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

(4) (ಎ) ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅದಕ್ಕೆ ಅನುಸಾರವಾಗಿ ತನಗೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಚಲಾಯಿಸುವ ಅಥವಾ ವಿಧಿಸಲಾದ ಯಾವುವೇ ಕರ್ತವ್ಯಗಳನ್ನು ನಿರ್ವಹಿಸುವ ಅಥವಾ ಅನ್ಯಥಾ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಥವಾ ಅದರ ಮೇರೆಗೆ ಮಾಡಿದ ಅಥವಾ ನೀಡಿದ ಯಾವುವೇ ಆದೇಶಗಳು ಅಥವಾ ನಿರ್ದೇಶನಗಳ ಮೇರೆಗೆ ಕೈಗೊಂಡ ಅಥವಾ ಕೈಗೊಳ್ಳಬೇಕಾದ ಪ್ರತಿಬಂಧಕ ಅಥವಾ ಪರಿಹಾರ ಕ್ರಮಗಳಿಗೆ ಸಂಬಂಧಿಸಿದ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸುವ ಯಾರೇ ಅಧಿಕಾರಿ ಅಥವಾ ವ್ಯಕ್ತಿಗೆ; ಅಥವಾ

(ಬಿ) ಮೇಲೆ ಹೇಳಿದ ಯಾರೇ ಅಧಿಕಾರಿಯ ಅಥವಾ ವ್ಯಕ್ತಿಯ ಆದೇಶಗಳನ್ನು ಅಥವಾ ನಿರ್ದೇಶನಗಳನ್ನು ಕಾರ್ಯಗತಗೊಳಿಸುವ ಯಾರೇ ವ್ಯಕ್ತಿಗೆ ಅಥವಾ ಅನ್ಯಥಾ ಈ ಅಧಿನಿಯಮದ ಅಥವಾ ಅದರ ಮೇರೆಗೆ ಮಾಡಿದ ಯಾವುವೇ ಆದೇಶಗಳನ್ನು ಅಥವಾ ನೀಡಲಾದ ಯಾವುವೇ ನಿರ್ದೇಶನಗಳನ್ನು ಪಾಲಿಸುವಾಗ ತನ್ನ ಕರ್ತವ್ಯಕ್ಕನುಸಾರವಾಗಿ ಕಾರ್ಯನಿರ್ವಹಿಸುವ ಯಾರೇ ವ್ಯಕ್ತಿಗೆ;

- ಉದ್ದೇಶಪೂರ್ವಕವಾಗಿ ಅಡ್ಡಿಪಡಿಸುವ ಅಥವಾ ಯಾವುದೇ ಪ್ರತಿರೋಧ ಒಡ್ಡುವ ಅಥವಾ ಅಡಚಣೆ ಮಾಡುವ ಅಥವಾ ಅನ್ಯಥಾ ಹಸ್ತಕ್ಷೇಪ ಮಾಡುವ ಯಾರೇ ಆಗಲಿ ಅಪರಾಧ ನಿರ್ಣಯವಾದ ಮೇಲೆ ಐದುನೂರು ರೂಪಾಯಿಗಳವರೆಗಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**14. ಅಪರಾಧಗಳ ಸಂಜ್ಞೇಯತೆ.–** ಕೃಷಿ ಉಪ-ನಿರ್ದೇಶಕರು, ಅಥವಾ ಅವರ ಅಧಿಕಾರ ಪತ್ರದ ಮೇರೆಗೆ ನೀಡಿದ ದೂರನ್ನುಳಿದು ಯಾವುದೇ ನ್ಯಾಯಾಲಯವು ಈ ಅಧಿನಿಯಮದ ಮೇರೆಗೆ ದಂಡನೀಯವಾದ ಯಾವುದೇ ಅಪರಾಧವನ್ನು ಸಂಜ್ಞಾನಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

**15. ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಮೇರೆಗಿನ ಯಾವುದೇ ಅಪರಾಧವನ್ನು ಮಾಡುವ ವ್ಯಕ್ತಿಯು ಕಂಪನಿಯಾಗಿದ್ದರೆ, ಆ ಅಪರಾಧವು ನಡೆದ ಕಾಲದಲ್ಲಿ ಆ ಕಂಪನಿಯ ಪ್ರಭಾರವನ್ನು ಹೊಂದಿದ್ದ ಮತ್ತು ಕಂಪನಿಯ ವ್ಯವಹಾರವನ್ನು ನಡೆಸಲು ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಮತ್ತು ಕಂಪನಿಯನ್ನು ಸಹ ಆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ತನ್ನ ವಿರುದ್ಧ ವ್ಯವಹರಣೆಗೆ ಅವರು/ ಅದು ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತವಾಗತಕ್ಕದ್ದು:

ಪರಂತು, ಅಂಥ ಯಾವನೇ ವ್ಯಕ್ತಿಯು ತನಗೆ ತಿಳಿಯದಂತೆ ಆ ಅಪರಾಧವು ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ಎಲ್ಲಾ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ಅವನು ರುಜುವಾತುಪಡಿಸಿದರೆ, ಈ ಉಪ-ಪ್ರಕರಣದಲ್ಲಿರುವುದಾವುದೂ ಅವನನ್ನು ಅಂಥ ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) (1)ನೇ ಉಪ-ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿದ್ದರೆ ಮತ್ತು ಆ ಅಪರಾಧವನ್ನು ಯಾರೇ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಕಂಪನಿಯ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ಮಾಡಲಾಗಿದೆಯೆಂದು ರುಜುವಾತಾದರೆ ಅಥವಾ ಅವರ ಯಾವುದೇ ನಿರ್ಲಕ್ಷ್ಯದಿಂದ ಸಂಭವಿಸಿತೆಂದು ಆರೋಪಿಸಬಹುದಾದರೆ ಅಂಥ ನಿರ್ದೇಶಕನನ್ನು, ವ್ಯವಸ್ಥಾಪಕನನ್ನು, ಕಾರ್ಯದರ್ಶಿಯನ್ನು ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಅವರು ತಮ್ಮ ವಿರುದ್ಧದ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತರಾಗತಕ್ಕದ್ದು.

ವಿವರಣೆ.- ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) "ಕಂಪನಿ" ಎಂದರೆ ಒಂದು ನಿಗಮಿತ ನಿಕಾಯ ಮತ್ತು ಅದು ಒಂದು ಫರ್ಮನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ;

(ಬಿ) ಫರ್ಮಿನ ಸಂಬಂಧದಲ್ಲಿ "ನಿರ್ದೇಶಕ" ಎಂದರೆ ಫರ್ಮಿನ ಪಾಲುದಾರ.

**16. ಈ ಅಧಿನಿಯಮದ ಮೇರೆಗೆ ಕೈಗೊಂಡ ಕ್ರಮದ ರಕ್ಷಣೆ.-** ಈ ಅಧಿನಿಯಮದ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯದ ಸಂಬಂಧದಲ್ಲಿ ಅಥವಾ ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವಲ್ಲಿ ಸದ್ಭಾವನೆಯಿಂದ ಕೈಗೊಂಡ ಯಾವುದೇ ಕ್ರಮದಿಂದ ಉಂಟಾದ ಯಾವುದೇ ಹಾನಿಗಾಗಿ ರಾಜ್ಯ ಸರ್ಕಾರ ಅಥವಾ ಯಾರೇ ಅಧಿಕಾರಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**17. ಪರಿಶೀಲನಾಧಿಕಾರಿಗಳ ನೇಮಕ .-** ಈ ಅಧಿನಿಯಮದ ಮೇರೆಗೆ ಪರಿಶೀಲನಾಧಿಕಾರಿಯ ಅಧಿಕಾರಗಳನ್ನು ಚಲಾಯಿಸುವ ಮತ್ತು ಕರ್ತವ್ಯಗಳನ್ನು ನಿರ್ವಹಿಸುವ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚನೆ ಹೊರಡಿಸಿ, ಪರಿಶೀಲನಾಧಿಕಾರಿಗಳನ್ನು ನೇಮಿಸಬಹುದು.

**18. ಅಧಿಕಾರಗಳ ಪ್ರತ್ಯಾಯೋಜನೆ.-** ರಾಜ್ಯ ಸರ್ಕಾರವು, ಅಧಿಸೂಚನೆ ಹೊರಡಿಸಿ, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೊಳಪಟ್ಟು ಕೃಷಿ ನಿರ್ದೇಶಕನಿಗೆ ಅಥವಾ ಯಾರೇ ಇತರ ಅಧಿಕಾರಿಗೆ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ 18 ಮತ್ತು 19ನೇ ಪ್ರಕರಣಗಳ ಮೂಲಕ ತನಗೆ ಪ್ರದತ್ತವಾದ ಅಧಿಕಾರಗಳನ್ನು ಹೊರತುಪಡಿಸಿ, ಈ ಅಧಿನಿಯಮದ ಮೇರೆಗಿನ ಅದರ ಎಲ್ಲಾ ಅಥವಾ ಯಾವುದೇ ಅಧಿಕಾರಗಳನ್ನು ಪ್ರತ್ಯಾಯೋಜಿಸಬಹುದು:

ಪರಂತು, ಕೃಷಿ ನಿರ್ದೇಶಕರನ್ನು ಹೊರತುಪಡಿಸಿ ಯಾರೇ ಅಧಿಕಾರಿಗೆ ಅಥವಾ ಪ್ರಾಧಿಕಾರಕ್ಕೆ 3ನೇ ಪ್ರಕರಣದ ಮೇರೆಗಿನ ಅಧಿಕಾರಗಳ ಪ್ರತ್ಯಾಯೋಜನೆಯನ್ನು ಮಾಡತಕ್ಕದ್ದಲ್ಲ.

**19. ರಾಜ್ಯ ಸರ್ಕಾರದಿಂದ ನಿರ್ದೇಶನಗಳು.-** ರಾಜ್ಯ ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶಗಳ ಮೂಲಕ, ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಆ ಅಧಿಕಾರಿಗಳಿಗೆ ಪ್ರದತ್ತವಾದ ಅಧಿಕಾರಗಳನ್ನು ಅಂಥ ಆದೇಶಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂಥ ಪ್ರದೇಶಗಳಲ್ಲಿ ಅಥವಾ ಅಂಥ ಬೆಳೆಗಳ ಸಂಬಂಧದಲ್ಲಿ ಅಂಥ ಅಧಿಕಾರಿಗಳು ಚಲಾಯಿಸತಕ್ಕದ್ದೆಂದು ನಿರ್ದೇಶಿಸಬಹುದು.

**20. ನಿಯಮ ರಚನಾಧಿಕಾರ.-** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆ ಹೊರಡಿಸಿ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚಿನ ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿವಸಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇಡಲಾದ ಅಧಿವೇಶನ ಅಥವಾ ಮೇಲೆ ಹೇಳಿದ ಅನುಕ್ರಮದ ಅಧಿವೇಶನಗಳು ಮುಕ್ತಾಯವಾಗುವುದಕ್ಕೆ ಮುಂಚೆ ಆ ನಿಯಮಗಳಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ, ಆ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**21. ನಿರಸನ ಮತ್ತು ಉಳಿಸುವಿಕೆಗಳು.-** [1][ಕರ್ನಾಟಕ ರಾಜ್ಯದ][1] ವಿವಿಧ ಪ್ರದೇಶಗಳಲ್ಲಿ ಜಾರಿಯಲ್ಲಿರುವ ಮುಂಬಯಿ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ಅಧಿನಿಯಮ, 1947 (1947ರ ಮುಂಬಯಿ ಅಧಿನಿಯಮ ಸಂಖ್ಯೆ 43), ಕೊಡಗು ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ಅಧಿನಿಯಮ, 1933 (1933ರ ಕೊಡಗು ಅಧಿನಿಯಮ ಸಂಖ್ಯೆ 2), ಹೈದರಾಬಾದ್ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ವಿನಿಮಯ, 1352 ಫಸಲಿ, ಮದರಾಸು ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ಅಧಿನಿಯಮ, 1919 (1919ರ ಮದ್ರಾಸು ಅಧಿನಿಯಮ ಸಂಖ್ಯೆ 3) ಮತ್ತು ಕರ್ನಾಟಕ ವಿನಾಶಕಾರಿ ಕ್ರಿಮಿಗಳು ಮತ್ತು ಕೀಟಗಳ ಅಧಿನಿಯಮ, 1917 (ಕರ್ನಾಟಕ ಅಧಿನಿಯಮ 1917ರ 6) - ಇವುಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, [1][ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899 (ಕರ್ನಾಟಕ ಅಧಿನಿಯಮ 1899ರ 3)][1] ರ 6ನೇ ಪ್ರಕರಣವು ಅಂಥ ನಿರಸನಕ್ಕೆ ಅನ್ವಯವಾಗತಕ್ಕದ್ದು ಮತ್ತು ಸದರಿ ಅಧಿನಿಯಮದ 8 ಮತ್ತು 24ನೇ ಪ್ರಕರಣಗಳು ಸದರಿ ಅಧಿನಿಯಮಗಳನ್ನು ಈ ಅಧಿನಿಯಮದ ಮೂಲಕ ನಿರಸನಗೊಳಿಸಿ ಪುನರ್ ಅಧಿನಿಯಮಿತಿಗೊಳಿಸಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

**ಅಧಿಸೂಚನೆ ಬೆಂಗಳೂರು, ದಿನಾಂಕ 13ನೇ ಅಕ್ಟೋಬರ್ 1971 ಕ್ರಮಾಂಕ ಎಎಫ್. 142 ಎಎಂಎಸ್ 69**

ಎಸ್.ಓ. 1734 ಎ – ಮೈಸೂರು ಕೃಷಿ ಸಂಬಂಧಿ ಕೀಟಗಳ ಮತ್ತು ರೋಗಗಳ ಅಧಿನಿಯಮ, 1968 (1969ರ ಮೈಸೂರು ಅಧಿನಿಯಮ ಸಂ.1)ರ 1ನೇ ಪ್ರಕರಣದ (3)ನೇ ಉಪ-ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು 1971ರ ಅಕ್ಟೋಬರ್ 13ನೇ ದಿನವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ನಾಯಕ್,**
ಸರ್ಕಾರದ ಕಾರ್ಯದರ್ಶಿ, ಕೃಷಿ ಮತ್ತು ಅರಣ್ಯ ಇಲಾಖೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಸಿ(ii), ದಿನಾಂಕ 13-10-1971ರಲ್ಲಿ ಸಂಖ್ಯೆ 142 ಎಂದು ಪ್ರಕಟಿಸಲಾಗಿದೆ.)

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶದ ಮೂಲದ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

[1][**70. ನೀರು ಪೂರೈಕೆ ಮತ್ತು ಒಳಚರಂಡಿ ಕಾಮಗಾರಿಗಳ ಸಂಬಂಧದಲ್ಲಿ ನಿಯೋಜಿತರಾದ ಸ್ಥಳೀಯ ಪ್ರಾಧಿಕಾರಗಳ ನೌಕರರಿಗೆ ಸಂಬಂಧಿಸಿದ ಉಪಬಂಧಗಳು:-**(1) ಯಾವುದೇ ಸ್ಥಳೀಯ ಪ್ರಾಧಿಕಾರದ ಯಾವುದೇ ನೀರು ಸರಬರಾಜು ಅಥವಾ ಒಳಚರಂಡಿ ಉದ್ಯಮವು ಮಂಡಲಿಯಲ್ಲಿ ನಿಹಿತವಾಗಿರುವಲ್ಲಿ ಹಾಗೆ ನಿಹಿತವಾದ ದಿನಾಂಕದಿಂದ ಜಾರಿಗೆ ಬರುವಂತೆ, ಸಂದರ್ಭಾನುಸಾರ ನೀರು ಸರಬರಾಜು ಕಾಮಗಾರಿಯ ಅಥವಾ ಒಳಚರಂಡಿ ವ್ಯವಸ್ಥೆ ಕಾಮಗಾರಿಯ ಸಂಬಂಧದಲ್ಲಿ ನಿಯೋಜಿತವಾಗಿರುವ ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರದ ಪ್ರತಿಯೊಬ್ಬ ಅಧಿಕಾರಿ ಅಥವಾ ಇತರ ನೌಕರನು, ರಾಜ್ಯ ಸರ್ಕಾರವು ನಿರ್ಧರಿಸಬಹುದಾದಂಥ ಪದನಾಮದೊಡನೆ ಮಂಡಲಿಗೆ ವರ್ಗಾಯಿತನಾಗಿರತಕ್ಕುದು, ಮತ್ತು ಮಂಡಲಿಯ ಒಬ್ಬ ಅಧಿಕಾರಿ ಅಥವಾ ಇತರ ನೌಕರನಾಗತಕ್ಕದ್ದು ಮತ್ತು ತಾನು ಸ್ಥಳೀಯ ಪ್ರಾಧಿಕಾರ ವರ್ಗದ ಒಬ್ಬ ಅಧಿಕಾರಿಯಾಗಿ ಅಥವಾ ನೌಕರನಾಗಿ ಮುಂದುವರಿದಿದ್ದರೆ ಯಾವ ಪದಾವಧಿ, ಸಂಭಾವನೆ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ಆ ಹುದ್ದೆಯನ್ನು ಹೊಂದಿರುತ್ತಿದ್ದನೋ ಅದೇ ಪದಾವಧಿ, ಸಂಭಾವನೆ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಪದಧಾರಣ ಮಾಡತಕ್ಕದ್ದು ಮತ್ತು ಅಂಥ ಪದಾವಧಿ, ಸಂಭಾವನೆ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ಮಂಡಲಿಯು ವಿಧ್ಯುಕ್ತವಾಗಿ ಮಾರ್ಪಾಡಿಸಿದ ಹೊರತು ಮತ್ತು ಮಾರ್ಪಡಿಸುವವರೆಗೆ ಹಾಗೆ ಪದಧಾರಣ ಮಾಡುವುದು ಮುಂದುವರಿಯತಕ್ಕದ್ದು:

ಪರಂತು, ಸ್ಥಳೀಯ ಪ್ರಾಧಿಕಾರದಲ್ಲಿ ಅಂಥ ಅಧಿಕಾರಿಯು ಅಥವಾ ನೌಕರನು ಅಂಥ ವರ್ಗಾವಣೆಗೆ ಮುಂಚೆ ಸಲ್ಲಿಸಿದ ಯಾವುದೇ ಸೇವೆಯನ್ನು ಮಂಡಲಿಯ ಅಧೀನದಲ್ಲಿ ಸಲ್ಲಿಸಿದ ಸೇವೆಯೆಂದು ಭಾವಿಸತಕ್ಕದ್ದು.

**71. ನೇಮಕಾತಿಗಳು, ಅಧಿಸೂಚನೆಗಳು, ನಿಯಮಗಳು, ಉಪ-ವಿಧಿಗಳು, ಮುಂತಾದವುಗಳನ್ನು ಮುಂದುವರಿಸುವುದು:-** (1) ಯಾವುದೇ ಸ್ಥಳೀಯ ಪ್ರಾಧಿಕಾರದ ನೀರು ಸರಬರಾಜು ಅಥವಾ ಒಳಚರಂಡಿ ವ್ಯವಸ್ಥೆ ಕಾಮಗಾರಿಗಳನ್ನು ಮಂಡಲಿಯಲ್ಲಿ ನಿಹಿತಗೊಳಿಸಿದ ದಿನಾಂಕದಿಂದ-

(ಎ) 1964ರ ಕರ್ನಾಟಕ ಪೌರಸಭೆಗಳ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೇರೆಗೆ ಮಾಡಲಾದ ಅಥವಾ ನೀಡಿದ ಯಾವುದೇ ನೇಮಕಾತಿ, ಅಧಿಸೂಚನೆ, ಆದೇಶ, ತೆರಿಗೆ, ದರಗಳು, ಬಾಡಿಗೆಗಳು, ಶುಲ್ಕಗಳು ಮತ್ತು ಇತರ ಚಾರ್ಜುಗಳು, ಯೋಜನೆ, ನಿಯಮ, ಉಪ-ವಿಧಿ, ನಮೂನೆ ಅಥವಾ ನೋಟೀಸು ಮತ್ತು ನೀಡಲಾದ ಯಾವುದೇ ಲೈಸೆನ್ಸು ಅಥವಾ ಅನುಮತಿಯನ್ನು, ನೀರು ಸರಬರಾಜು ಮತ್ತು ಒಳಚರಂಡಿ ಕಾಮಗಾರಿಗಳಿಗೆ ಅವು ಸಂಬಂಧಿಸಿರುವಷ್ಟರ ಮಟ್ಟಿಗೆ ಈ ಅಧಿನಿಯಮದ ಮೇರೆಗೆ ಮಾಡಲಾದ, ನೀಡಲಾದ, ವಿಧಿಸಿದ ಅಥವಾ ಮಂಜೂರು ಮಾಡಿದ ಯಾವುದೇ ನೇಮಕಾತಿ, ಅಧಿಸೂಚನೆ, ತೆರಿಗೆ, ದರಗಳು, ಬಾಡಿಗೆಗಳು, ಶುಲ್ಕಗಳು ಮತ್ತು ಇತರ ವೆಚ್ಚಗಳು, ಆದೇಶ, ಯೋಜನೆ, ನಿಯಮ, ಉಪ-ವಿಧಿ, ನಮೂನೆ, ನೋಟೀಸು, ಲೈಸೆನ್ಸು ಅಥವಾ ಅನುಮತಿಯ ಮೂಲಕ ಅವು ರದ್ದು ಮಾಡುವವರೆಗೆ ಅಥವಾ ಮಾರ್ಪಾಡು ಮಾಡುವವರೆಗೆ ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಮಾಡಲಾಗಿದೆ ಅಥವಾ ನೀಡಲಾಗಿದೆ ಅಥವಾ ಮಂಜೂರು ಮಾಡಲಾಗಿದೆ ಎಂದು ಭಾವಿಸತಕ್ಕದ್ದು.

(ಬಿ) ಸರ್ಕಾರವು ಅಧಿಸೂಚಿಸಬಹುದಾದಂಥ ನೀರು ಸರಬರಾಜು ಅಥವಾ ಒಳಚರಂಡಿ ಉದ್ಯಮದ ಸಂಬಂಧದಲ್ಲಿ ಅಂತಹ ಕಾರ್ಯಾಚರಣೆ ಮತ್ತು ನಿರ್ವಹಣೆಗೆ ಸಂಬಂಧಪಡುವಷ್ಟರ ಮಟ್ಟಿಗೆ ಸ್ಥಳೀಯ ಪ್ರಾಧಿಕಾರದೊಡನೆ ಅಥವಾ ಅದರ ಪರವಾಗಿ ವಹಿಸಲಾದ ಎಲ್ಲಾ ಬದ್ಧತೆಗಳು ಮತ್ತು ಹೊಣೆಗಳು, ಮಾಡಿಕೊಳ್ಳಲಾದ ಎಲ್ಲ ಕರಾರುಗಳು, ಮಾಡಬೇಕೆಂದು ಒಪ್ಪಿಕೊಳ್ಳಲಾದ ಎಲ್ಲ ವಿಷಯಗಳನ್ನು, ಕಾರ್ಯಗಳನ್ನು ಮಂಡಲಿಯೊಡನೆ ಅಥವಾ ಮಂಡಲಿಯ ಪರವಾಗಿ ವಹಿಸಲಾಗಿದೆ ಎಂದು, ಮಾಡಿಕೊಳ್ಳಲಾಗಿದೆ ಎಂದು ಅಥವಾ ಮಾಡಲು ಒಪ್ಪಿಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

(ಸಿ) ಸರ್ಕಾರವು ಅಧಿಸೂಚಿಸಬಹುದಾದಂತೆ, ನೀರು ಸರಬರಾಜು ಅಥವಾ ಒಳಚರಂಡಿ ಕಾಮಗಾರಿಯ ಸಂಬಂಧದಲ್ಲಿ ಅಂತಹ ಕಾರ್ಯಾಚರಣೆ ಮತ್ತು ನಿರ್ವಹಣೆಗೆ ಸಂಬಂಧಪಡುವಷ್ಟರ ಮಟ್ಟಿಗೆ, ಸ್ಥಳೀಯ ಪ್ರಾಧಿಕಾರದಲ್ಲಿ ನಿಹಿತವಾದ ಎಲ್ಲ ಸ್ಥಿರ ಮತ್ತು ಚರ ಸ್ವತ್ತನ್ನು ಮತ್ತು ಯಾವುದೇ ಸ್ವರೂಪದ ಮತ್ತು ರೀತಿಯ ಎಲ್ಲ ಹಿತಾಸಕ್ತಿಗಳು ಸ್ಥಳೀಯ ಪ್ರಾಧಿಕಾರವು ನೀರು ಸರಬರಾಜು ಅಥವಾ ಒಳಚರಂಡಿ ಉದ್ಯಮದ ಸಂಬಂಧದಲ್ಲಿ ಉಪಯೋಗಿಸುವ, ಅನುಭೋಗಿಸುವ ಅಥವಾ ಹೊಂದಿರುವ ಯಾವುದೇ ವಿವರಣೆಯ ಎಲ್ಲ ಹಕ್ಕುಗಳೊಡನೆ ಮಂಡಲಿಯಲ್ಲಿ ನಿಹಿತವಾಗತಕ್ಕದ್ದು.

(ಡಿ) ನೀರು ಸರಬರಾಜು ಅಥವಾ ಒಳಚರಂಡಿ ಕಾಮಗಾರಿಯ ಸಂಬಂಧದಲ್ಲಿ ಸ್ಥಳೀಯ ಪ್ರಾಧಿಕಾರಕ್ಕೆ ಬಾಕಿ ಇರುವ ಎಲ್ಲ ದರಗಳು, (ಕಟ್ಟಡ ಮತ್ತು ಜಮೀನುಗಳ ಮೇಲೆ ನಿರ್ಧರಣೆ ಮಾಡಲಾದ ತೆರಿಗೆಯ ರೂಪದಲ್ಲಿ ಸ್ಥಳೀಯ ಪ್ರಾಧಿಕಾರವು ವಿಧಿಸುವ ನೀರಿನ ದರವೂ ಸೇರಿದಂತೆ) ಫೀಜುಗಳು, ಬಾಡಿಗೆಗಳು ಮತ್ತು ಮಂಡಲಿಗೆ ಬರಬೇಕಾಗಿರುವ ಇತರ ಮೊಬಲಗುಗಳನ್ನು ಮಂಡಲಿಯ ಬಾಕಿ ಎಂದು ಭಾವಿಸತಕ್ಕದ್ದು ಮತ್ತು ಈ ಅಧಿನಿಯಮದ ಮೇರೆಗೆ ವಸೂಲ್ಮಾಡತಕ್ಕದ್ದು.

(ಇ) ನೀರು ಸರಬರಾಜು ಅಥವಾ ಒಳಚರಂಡಿ ಕಾಮಗಾರಿಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ, ಸ್ಥಳೀಯ ಪ್ರಾಧಿಕಾರದ ವಿರುದ್ಧ ಮಾಡಲಾದ ಅಥವಾ ಹೂಡಬಹುದಾಗಿದ್ದ, ಎಲ್ಲ ದಾವೆಗಳು, ಪ್ರಾಸಿಕ್ಯೂಷನ್‌ಗಳು ಮತ್ತು ಇತರ ಕಾನೂನು ವ್ಯವಹರಣೆಗಳನ್ನು ಮಂಡಲಿಯಿಂದ ಅಥವಾ ಮಂಡಲಿಯ ವಿರುದ್ಧವಾಗಿ ಮುಂದುವರಿಸಬಹುದು ಅಥವಾ ಅದರ ವಿರುದ್ಧ ಹೂಡಬಹುದು.][1]

1. 1981ರ ಅಧಿನಿಯಮ ಸಂಖ್ಯೆ 45ರ ಮೂಲಕ 1.10.1981ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧಿಸೂಚನೆಗಳು

**ಬೆಂಗಳೂರು ದಿನಾಂಕ 9/10ನೇ ಅಕ್ಟೋಬರ್ 1974 [I ಸಂಖ್ಯೆ ಎಚ್ಎಂ.ಎ 165 ಎಂಎನ್ಎಂ 747]**

ಎಸ್.ಓ. 1758:- ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ ಮಂಡಲಿ ಅಧಿನಿಯಮ 1973ರ 1ನೇ ಪ್ರಕರಣದಲ್ಲಿ (3) ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಸಾವಿರದ ಒಂಬೈನೂರ ಎಪ್ಪತ್ತನಾಲ್ಕರ ಅಕ್ಟೋಬರ್ ಹದಿನೈದನೇ ದಿವಸವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕ ಎಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ.

**ಸಿ.ಎನ್. ನರಸಿಂಹ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಪೌರಸಭಾ ಆಡಳಿತ ಇಲಾಖೆ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ ) ಭಾಗ IV-2ಸಿii ದಿನಾಂಕ 10.10.1974 ರಲ್ಲಿ ಸಂಖ್ಯೆ 3262 ರಲ್ಲಿ ಪ್ರಕಟವಾಗಿದೆ.)

II

**ಬೆಂಗಳೂರು, ದಿನಾಂಕ 1ನೇ ಅಕ್ಟೋಬರ್ 1981 [ಸಂಖ್ಯೆ ಎಚ್‌ಯುಡಿ 89 ಎಂಎನ್ಎಸ್ 79]**

ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ ಮಂಡಲಿ (ತಿದ್ದುಪಡಿ) ಅಧಿನಿಯಮ, (1981ರ ಕರ್ನಾಟಕ ಅಧಿನಿಯಮ ಸಂಖ್ಯೆ 45) 1ನೇ ಪ್ರಕರಣದ (2)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು 1981ರ ಅಕ್ಟೋಬರ್ ಮೊದಲನೇ ದಿವಸವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕ ಎಂಬುದಾಗಿ ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ.

**ಆರ್.ಎಸ್. ಸುಜಾತ**

ಸರ್ಕಾರದ ಉಪ ಕಾರ್ಯದರ್ಶಿ,
ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ (ವಸತಿ)

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ ) ಭಾಗ IV-2ಸಿii ದಿನಾಂಕ 1.10.1984 ರಲ್ಲಿ ಸಂಖ್ಯೆ 736 ರಲ್ಲಿ ಪ್ರಕಟವಾಗಿದೆ.)

## ಕರ್ನಾಟಕ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ ಮಂಡಲಿ ನಿಯಮಗಳು, 1974

### ಪ್ರಕರಣಗಳ ವಿಷಯಾನುಕ್ರಮಣಿಕೆ

**ನಿಯಮಗಳು:**

**ಭಾಗ-I**



**ಭಾಗ-II**

**ಮಂಡಲಿ**

## ಆರೋಗ್ಯ ಮತ್ತು ಪೌರಾಡಳಿತ ಸಚಿವಾಲಯ

### ಅಧಿಸೂಚನೆ

**ಬೆಂಗಳೂರು, ದಿನಾಂಕ 15ನೇ ನವೆಂಬರ್ 1974.**

ಜಿ.ಎಸ್. ಆರ್.314:- ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ ಮಂಡಲಿ ಅಧಿನಿಯಮ, 1973 (1974ರ ಕರ್ನಾಟಕ ಅಧಿನಿಯಮ 25 ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮುಂದಿನ ನಿಯಮಗಳನ್ನು ರಚಿಸಿದೆ, ಸದರಿ ನಿಯಮಗಳ ಕರಡನ್ನು, ಸದರಿ ಅಧಿನಿಯಮದ 68ನೇ ಪ್ರಕರಣದ (1)ನೇ ಉಪ-ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ದಿನಾಂಕ 29ನೇ ಅಕ್ಟೋಬರ್ 1974ರ ಕರ್ನಾಟಕ ರಾಜಪತ್ರದ ವಿಶೇಷ ಸಂಚಿಕೆಯ ಭಾಗ IV ರ ವಿಭಾಗ 2ಸಿ (i)ನಲ್ಲಿ ಜಿ.ಎಸ್.ಆರ್. 297 ದಿನಾಂಕ 29ನೇ ಅಕ್ಟೋಬರ್ 1974ನೇ ಹೆಚ್.ಎಂ.ಎ. 165 ಎಂ.ಎನ್.ಎಂ. 74ನೇ ಕ್ರಮಾಂಕದ ಅಧಿಸೂಚನೆಯ ಮೂಲಕ ಪ್ರಕಟಿಸಲಾಗಿದೆ.

### ಭಾಗ-I

1. **ಹೆಸರು ಮತ್ತು ಪ್ರಾರಂಭ:-** (1) ಈ ನಿಯಮಗಳನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ ಮಂಡಲಿ ನಿಯಮಗಳು, 1974 ಎಂದು ಕರೆಯತಕ್ಕದ್ದು.

(2) ಅವು ಈ ಕೂಡಲೇ ಜಾರಿಗೆ ಬರತಕ್ಕದ್ದು.

2. **ಪರಿಭಾಷೆ:-** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಅಧಿನಿಯಮ" ಎಂದರೆ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ ಮಂಡಲಿ ಅಧಿನಿಯಮ, 1973 (1974ರ ಕರ್ನಾಟಕ ಅಧಿನಿಯಮ 25);

(ಬಿ) "ಮಂಡಲಿ" ಎಂದರೆ, 4ನೇ ಪ್ರಕರಣದ ಮೇರೆಗೆ ರಚಿತವಾದ ಕರ್ನಾಟಕ ನಗರ ನೀರು ಸರಬರಾಜು ಮತ್ತು ಚರಂಡಿ ವ್ಯವಸ್ಥೆ ಮಂಡಲಿ;

(ಸಿ) "ಅಧ್ಯಕ್ಷ" ಎಂದರೆ, ಮಂಡಲಿಯ ಅಧ್ಯಕ್ಷ;

(ಡಿ) "ಸಮಿತಿ" ಎಂದರೆ, 4ನೇ ಪ್ರಕರಣದ ಮೇರೆಗೆ ನೇಮಕ ಮಾಡಲಾದ ಸಮಿತಿ;

(ಇ) "ರಾಜ್ಯ ಸರ್ಕಾರ" ಎಂದರೆ, ಕರ್ನಾಟಕ ರಾಜ್ಯ ಸರ್ಕಾರ;

(ಎಫ್) "ಸರ್ಕಾರಿ ನೌಕರ" ಎಂದರೆ, ಸರ್ಕಾರದಿಂದ ನಿಯೋಜಿತಗೊಂಡ ವ್ಯಕ್ತಿ;

(ಜಿ) "ಪ್ರಕರಣ" ಎಂದರೆ, ಅಧಿನಿಯಮದ ಪ್ರಕರಣ.

### ಭಾಗ-II

### ಮಂಡಲಿ

3. **ಅಧ್ಯಕ್ಷ ಮತ್ತು ವ್ಯವಸ್ಥಾಪಕ ನಿರ್ದೇಶಕರ ನೇಮಕಾತಿಗಾಗಿ ಅರ್ಹತೆ:-**ಅಧ್ಯಕ್ಷರು, ಸಾರ್ವಜನಿಕ ಕಲ್ಯಾಣಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಅನುಭವ ಹೊಂದಿರತಕ್ಕ ವ್ಯಕ್ತಿಯಾಗಿರತಕ್ಕದ್ದು. ವ್ಯವಸ್ಥಾಪಕ ನಿರ್ದೇಶಕನು ಆಡಳಿತದಲ್ಲಿ ಅನುಭವ ಹೊಂದಿರುವ ಮತ್ತು ವಾಣಿಜ್ಯ ವಿಷಯಗಳನ್ನು ವ್ಯವಹರಿಸಲು ಸಮರ್ಥನಾಗಿರುವ ವ್ಯಕ್ತಿಯಾಗಿರತಕ್ಕದ್ದು.

4. **ಪರಿಶ್ರಮ ಧನ ಮತ್ತು ಭತ್ಯೆಗಳು:-**(1) ಒಬ್ಬ ನೌಕರನನ್ನು ಅಧ್ಯಕ್ಷನಾಗಿ ನೇಮಕ ಮಾಡಿದಲ್ಲಿ, ಅವನಿಗೆ ಅವನ ವೇತನ ಶ್ರೇಣಿಯಲ್ಲಿನ ವೇತನವನ್ನು ಮತ್ತು ಮಾಸಿಕ 150 ರೂ.ಗಳ ವಿಶೇಷ ವೇತನವನ್ನು ಮತ್ತು ಸರ್ಕಾರೇತರ ವ್ಯಕ್ತಿಯು ಅಧ್ಯಕ್ಷನಾಗಿ ನೇಮಕನಾದಲ್ಲಿ ಸರ್ಕಾರವು ನಿಗದಿಪಡಿಸಬಹುದಾದ ಪರಿಶ್ರಮ ಧನ ಮತ್ತು ಇತರ ಪರಿಹಾರ ಭತ್ಯಗಳನ್ನು ಸಂದಾಯ ಮಾಡತಕ್ಕದ್ದು:

ಪರಂತು, ಹಾಗೆ ನೇಮಕಗೊಂಡ ವ್ಯಕ್ತಿಯು ಸಚಿವ ಅಥವಾ ಶಾಸಕನಾಗಿದ್ದಲ್ಲಿ, ಅವನು ಯಾವುದೇ ಪರಿಶ್ರಮಧನಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ.

(2) ವ್ಯವಸ್ಥಾಪಕ ನಿರ್ದೇಶಕನು, ಮಂಡಲಿಯ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಅವನಿಗೆ ಮಾಸಿಕವಾಗಿ 1500 ರೂ.ಗಳು ಹಾಗೂ ಇತರ ಭತ್ಯೆಗಳನ್ನು ಎಂದರೆ, ವಾಹನಭತ್ಯೆ, ಮನೆಬಾಡಿಗೆ ಭತ್ಯೆ ಮತ್ತು ತುಟ್ಟಿಭತ್ಯೆ ಇತ್ಯಾದಿಯನ್ನು 1ನೇ ವರ್ಗದ ರಾಜ್ಯ ಸರ್ಕಾರಿ ನೌಕರರಿಗೆ ಅಂಗೀಕಾರಾರ್ಹವಾಗುವ ದರದಲ್ಲಿ ಸಂದಾಯ ಮಾಡತಕ್ಕದ್ದು.

(3) ಇತರ ನಿರ್ದೇಶಕರು ಮಂಡಲಿಯ ಸಭೆಗಳಲ್ಲಿ, ಉಪವೇಶನದ ಪ್ರತಿದಿನಕ್ಕೆ ನಲವತ್ತು ರೂಪಾಯಿಗಳ ಉಪವೇಶನ ಭತ್ಯೆಯನ್ನು ಮಾತ್ರ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು, ಆದರೆ, ಯಾವುದೇ ರೀತಿಯ ಇತರ ಭತ್ಯ ಅಥವಾ ಪರಿಶ್ರಮ ಧನವನ್ನು ಪಡೆಯಲು ಹಕ್ಕುಳ್ಳವರಾಗತಕ್ಕದ್ದಲ್ಲ.

**5. ರಜೆ:-** ಅಧ್ಯಕ್ಷನಿಗೆ ಅಥವಾ ವ್ಯವಸ್ಥಾಪಕ ನಿರ್ದೇಶಕನಿಗೆ ರಜೆಯನ್ನು ಮಂಜೂರು ಮಾಡುವ ಅಧಿಕಾರವು ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು.

(i) ವ್ಯವಸ್ಥಾಪಕ ನಿರ್ದೇಶಕನು ಸರ್ಕಾರದ 1ನೇ ವರ್ಗದ ಅಧಿಕಾರಿಗೆ ಅನುಮತಿಸಲಾಗುವ ರಜೆಗೆ ಹಕ್ಕುಳ್ಳವನಾಗತಕ್ಕದ್ದು.

(ii) ಪರಂತು, ಅಧ್ಯಕ್ಷನು, ವ್ಯವಸ್ಥಾಪಕ ನಿರ್ದೇಶಕನಿಗೆ ಸಾಂದರ್ಭಿಕ ರಜೆ ಮಂಜೂರ್ಮಾಡಲು ಅಧಿಕಾರ ಹೊಂದಿರತಕ್ಕದ್ದು.

**6. ಪ್ರಯಾಣ ಭತ್ಯೆ:-** (1) ಒಬ್ಬ ಅಧಿಕಾರೇತರ ನಿರ್ದೇಶಕನು, ಮಂಡಲಿಯ ಉದ್ದೇಶಕ್ಕಾಗಿ ಪ್ರಯಾಣ ಕೈಗೊಂಡಲ್ಲಿ, ಅವನು ಕಾಲಕಾಲಕ್ಕೆ 1ನೇ ವರ್ಗದ ಅಧಿಕಾರಿಗಳಿಗೆ ಅನುಮತಿಸತಕ್ಕ ಕರ್ನಾಟಕ ಸಿವಿಲ್ ಸೇವಾ ನಿಯಮಗಳಲ್ಲಿ ನಿರ್ದಿಷ್ಟಪಡಿಸಿರುವ ದರಗಳಲ್ಲಿ ಮತ್ತು ಷರತ್ತುಗಳಿಗೊಳಪಟ್ಟು ಪ್ರಯಾಣ ಭತ್ಯೆ ಪಡೆಯಲು ಹಕ್ಕುಳ್ಳವನಾಗತಕ್ಕದ್ದು.

(2) ಒಬ್ಬ ಸರ್ಕಾರಿ ನಿರ್ದೇಶಕನು, ಅವನು ಅಂಥ ಸೇವೆ ಅಥವಾ ಹುದ್ದೆಯಿಂದ ನಿವೃತ್ತನಾಗುವವರೆಗೆ, ಅಂಥ ಸೇವೆ ಅಥವಾ ಹುದ್ದೆಯಲ್ಲಿ ಅವನಿಗೆ ಅನ್ವಯಿಸತಕ್ಕ ಪ್ರಯಾಣ ಭತ್ಯೆಯ ನಿಯಮಗಳಿಗೆ ಒಳಪಟ್ಟಿರುವುದು ಮುಂದುವರಿಯತಕ್ಕದ್ದು. ಅಂಥ ಸೇವೆ ಅಥವಾ ಹುದ್ದೆಯಿಂದ ನಿವೃತ್ತನಾದ ಬಳಿಕ ಪ್ರಯಾಣಭತ್ಯೆಗೆ ಸಂಬಂಧಿಸಿದಂತೆ ಈ ನಿಯಮದ (1)ನೇ ಉಪನಿಯಮಕ್ಕೆ ಒಳಪಟ್ಟಿರತಕ್ಕದ್ದು.

**7. ರಾಜೀನಾಮೆ:-**ಅಧ್ಯಕ್ಷ ಅಥವಾ ಇತರ ಯಾರೇ ನಿರ್ದೇಶಕನು, ರಾಜ್ಯ ಸರ್ಕಾರಕ್ಕೆ, ಮೂರು ತಿಂಗಳ ಲಿಖಿತ ನೋಟೀಸು ಕೊಡುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ಕೊಡಬಹುದು; ಆದಾಗ್ಯೂ, ರಾಜ್ಯ ಸರ್ಕಾರವು ತನ್ನ ವಿವೇಚನೆಯಂತೆ ಈ ಷರತ್ತನ್ನು ಮನ್ನಾ ಮಾಡಬಹುದು.

**8. ವ್ಯವಹರಣೆಗಳು:-** ಮಂಡಲಿಯ ಪ್ರತಿಯೊಂದು ಸಭೆಯ ವ್ಯವಹರಣೆಗಳನ್ನು, ಆ ಉದ್ದೇಶಕ್ಕಾಗಿ ಇಡಲಾದ ನಡವಳಿ ಪುಸ್ತಕದಲ್ಲಿ ದಾಖಲ್ಮಾಡತಕ್ಕದ್ದು ಮತ್ತು ಆ ದಿನದ ಸಭೆಯ ಅಥವಾ ತರುವಾಯ ಸಭೆಯ ಅಧ್ಯಕ್ಷನು ಅದಕ್ಕೆ ಸಹಿ ಮಾಡತಕ್ಕದ್ದು.

**9. ಕೋರಂ:-** ಮಂಡಲಿಯ ಸಭೆಯ ಕೋರಂ, ಮಂಡಲಿಯ ನಿರ್ದೇಶಕರ ಒಟ್ಟು ಸಂಖ್ಯೆಯ ಮೂರನೇ ಒಂದರಷ್ಟಿರತಕ್ಕದ್ದು. ತೀರ್ಮಾನಕ್ಕಾಗಿ ಉದ್ಭವಿಸುವ ಎಲ್ಲಾ ಪ್ರಶ್ನೆಗಳನ್ನು ಮತಗಳ ಬಹುಮತದ ಮೂಲಕ ತೀರ್ಮಾನಿಸತಕ್ಕದ್ದು ಮತ್ತು ಈ ಸೂಚನೆಗೆ ಪರ ಮತ್ತು ವಿರುದ್ಧವಾಗಿ ಮತ ಚಲಾಯಿಸುವ ವ್ಯಕ್ತಿಗಳ ಹೆಸರನ್ನು ನಡವಳಿ ಪುಸ್ತಕದಲ್ಲಿ ದಾಖಲ್ಮಾಡತಕ್ಕದ್ದು, ಮತಗಳು ಸಮವಾಗಿ ಬಂದ ಸಂದರ್ಭದಲ್ಲಿ, ಅಧ್ಯಕ್ಷರು ಎರಡನೆಯ ನಿರ್ಣಾಯಕ ಮತವನ್ನು ಚಲಾಯಿಸುವ ಅಧಿಕಾರ ಹೊಂದಿರತಕ್ಕದ್ದು.

**10. ಸಭೆಯ ಅಧ್ಯಕ್ಷ:-** ಅಧ್ಯಕ್ಷನು ಮಂಡಲಿಯ ಪ್ರತಿಯೊಂದು ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಅಧ್ಯಕ್ಷನ ಗೈರುಹಾಜರಿಯಲ್ಲಿ ಅಧ್ಯಕ್ಷನು ನಾಮನಿರ್ದೇಶನ ಮಾಡಿದ ಸದಸ್ಯನು ಮತ್ತು ಅಧ್ಯಕ್ಷ ಹಾಗೂ ಅಂಥ ಸದಸ್ಯರಿಬ್ಬರೂ ಗೈರು ಹಾಜರಿದ್ದಾಗ ಸಭೆಯಲ್ಲಿ ಹಾಜರಿರುವ ಸದಸ್ಯರು ತಮ್ಮ ಪೈಕಿಯಿಂದ ಚುನಾಯಿಸಿದ ಒಬ್ಬ ಸದಸ್ಯನು ಅಧ್ಯಕ್ಷತೆ ವಹಿಸತಕ್ಕದ್ದು.

**11. ಸಭೆ ನಡೆಯುವ ಸ್ಥಳ:-** ಮಂಡಲಿಯು ಅನ್ಯಥಾ ಅಪೇಕ್ಷಿಸಿದಹೊರತು, ಎಲ್ಲಾ ಸಭೆಗಳು ಮಂಡಲಿಯ ಮುಖ್ಯ ಕಚೇರಿಯಲ್ಲಿ ನಡೆಯತಕ್ಕದ್ದು.

**12. ಅಧ್ಯಕ್ಷತೆ ವಹಿಸುವ ಅಧಿಕಾರಿಯು ವ್ಯವಹಾರ ನಡೆಸುವುದನ್ನು ತೀರ್ಮಾನಿಸುವುದು:-** ಈ ನಿಯಮಗಳಲ್ಲಿ ಅನ್ಯಥಾ ಉಪಬಂಧಿಸಿರದ ಹೊರತು, ಸಭೆಗಳಲ್ಲಿ ವ್ಯವಹಾರ ನಡೆಸುವುದಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಮೇಲೆ ಸಭೆಯ ಅಧ್ಯಕ್ಷತೆ ವಹಿಸುವ ವ್ಯಕ್ತಿಯ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

**13. ಸಭೆಯಲ್ಲಿ ಚರ್ಚಿಸಬೇಕಾದ ವಿಷಯಗಳ ಬಗ್ಗೆ ನಿರ್ಬಂಧಗಳು:-** ಈ ನಿಯಮಗಳಲ್ಲಿ ಏನೇ ಇದ್ದರೂ, ಅಧ್ಯಕ್ಷನು ಅಥವಾ ಅಧ್ಯಕ್ಷತೆ ವಹಿಸುವ ಸದಸ್ಯನು, ಯಾವುದೇ ಮಾಹಿತಿಯನ್ನು ಒದಗಿಸುವುದು ಸಾರ್ವಜನಿಕ ಹಿತಾಸಕ್ತಿಯಲ್ಲಿ ಅಗತ್ಯವಾದುದಲ್ಲವೆಂದು ಅಭಿಪ್ರಾಯಪಟ್ಟರೆ, ಮಂಡಲಿಯ ಯಾವುದೇ ಸಭೆಯಲ್ಲಿ ಅಂಥ ಯಾವುದೇ ಮಾಹಿತಿಯನ್ನು ಒದಗಿಸುವುದಕ್ಕೆ ಮಂಡಲಿಯು ಬದ್ಧವಾಗತಕ್ಕದ್ದಲ್ಲ.

**14. ಸ್ವತ್ತಿನ ವರ್ಗಾವಣೆ:–** 5,000 ರೂಪಾಯಿಗಳನ್ನು ಮೀರಿದ ಮೌಲ್ಯದ ಮಂಡಲಿಯ ಯಾವುದೇ ಸ್ವತ್ತನ್ನು ರಾಜ್ಯ ಸರ್ಕಾರದ ಪೂರ್ವಾನುಮೋದನೆಯಿಲ್ಲದೆ ವರ್ಗಾಯಿಸತಕ್ಕದ್ದಲ್ಲ.

**15. ಸ್ಥಳೀಯ ಪ್ರಾಧಿಕಾರಗಳ ಯೋಜನೆಗಳ ಅಂಗೀಕಾರ:–** 20ನೇ ಪ್ರಕರಣದ (2)ನೇ ಉಪ-ಪ್ರಕರಣದ ಮೇರೆಗಿನ ಯಾವುದೇ ಯೋಜನೆಯ ತನಿಖಾ ವರದಿಯನ್ನು ಸ್ಥಳೀಯ ಪ್ರಾಧಿಕಾರವು ಪರೀಕ್ಷಿಸತಕ್ಕ ಕಾಲಮಿತಿಯು ಮೂರು ತಿಂಗಳಾಗಿರತಕ್ಕದ್ದು.

**16. ಸರ್ಕಾರದ ಅನುಮೋದನೆಗೆ ಕಾಲಮಿತಿ:–** 21ನೇ ಪ್ರಕರಣದ ಮೇರೆಗೆ ಸರ್ಕಾರವು ತೀರ್ಮಾನ ತೆಗೆದುಕೊಳ್ಳುವುದಕ್ಕೆ ಕಾಲಮಿತಿಯು ಮೂರು ತಿಂಗಳಾಗಿರತಕ್ಕದ್ದು.

**17. ಯೋಜನಾ ವೆಚ್ಚಗಳ ವಸೂಲಿ:–** (1) ಮಂಡಲಿಯು ಯಾವುದೇ ಯೋಜನೆಯನ್ನು ತನಿಖೆ ಮಾಡುವುದಕ್ಕೆ ಸಂಬಂಧಿಸಿದ ವೆಚ್ಚವನ್ನು ಎರಡು ಅರ್ಧವಾರ್ಷಿಕ ಕಂತುಗಳಲ್ಲಿ ವಸೂಲು ಮಾಡತಕ್ಕದ್ದು.

(2) ಯಾವುದೇ ಯೋಜನೆಯನ್ನು ಸಿದ್ಧಪಡಿಸುವುದಕ್ಕೆ ಸಂಬಂಧಿಸಿದ ವೆಚ್ಚವನ್ನು ಒಂದು ವರ್ಷದ ಅವಧಿಯೊಳಗೆ ವಸೂಲು ಮಾಡತಕ್ಕದ್ದು ಮತ್ತು ಯಾವುದೇ ಯೋಜನೆಯನ್ನು ಜಾರಿಗೊಳಿಸುವುದಕ್ಕೆ ಸಂಬಂಧಿಸಿದ ವೆಚ್ಚವನ್ನು ಇಪ್ಪತ್ತು ಸಮ ವಾರ್ಷಿಕ ಕಂತುಗಳಲ್ಲಿ ವಸೂಲು ಮಾಡತಕ್ಕದ್ದು.

**18. ಮಂಡಲಿಯ ನಿಧಿಗಳು:–** ಮಂಡಲಿಯ ನಿಧಿಗಳನ್ನು, "847 ಸ್ಥಳೀಯ ನಿಧಿಗಳ ಠೇವಣಿ (X) ಇತರ ನಿಧಿಗಳು (28) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ ನಿಧಿಗಳು" ಎಂಬ ಶೀರ್ಷಿಕೆಯ ಅಡಿಯಲ್ಲಿ ಸರ್ಕಾರದ ಸಾರ್ವಜನಿಕ ಲೆಕ್ಕದಲ್ಲಿ ಠೇವಣಿ ಇಡತಕ್ಕದ್ದು.

(2) ವ್ಯವಸ್ಥಾಪಕ ನಿರ್ದೇಶಕನು ತನ್ನ ಸಹಿಯೊಂದಿಗೆ ಮಂಡಲಿಯ ನಿಧಿಗಳನ್ನು ನಿರ್ವಹಿಸತಕ್ಕದ್ದು.

**19. ಮಂಡಲಿಯ ಲೆಕ್ಕಗಳ ಪ್ರಕಟಣೆ:–** ಲೆಕ್ಕ ಪರಿಶೋಧಕನು ಪ್ರಮಾಣೀಕರಿಸಿದಂಥ ಮಂಡಲಿಯ ಲೆಕ್ಕಗಳನ್ನು ಮಂಡಲಿಯ ಕಚೇರಿಯ ಸೂಚನಾ ಫಲಕದಲ್ಲಿ ಅದರ ಒಂದು ಪ್ರತಿಯನ್ನು ಅಂಟಿಸುವ ಮೂಲಕ ಪ್ರಕಟಿಸತಕ್ಕದ್ದು.

(ನಂ.ಹೆಚ್.ಎಂ.ಎ. 165 ಎಂ.ಎಸ್.ಎಂ. 74.)

The above translation of the Karnataka UrbanWater Supply and Drainage Board Act, 1973 (Karnataka Act 25 of 1974) and Karnataka Urban Water Supply and Drainage Board Rules, 1974 shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963)

GOVERNOR OF KARNATAKA
ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

ಪಿ.ಆರ್. 828

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 85 ಸಿಎಸ್ಎಸ್ 2006, ಬೆಂಗಳೂರು, ದಿನಾಂಕ: 23 ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಧಾರವಾಡ ಜಿಲ್ಲೆ ಮತ್ತು ತಾಲ್ಲೂಕಿನ ಕರಡಿಗುಡ್ಡ ಗ್ರಾಮದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಶಂಕ್ರಪ್ಪ ಗಂಗಪ್ಪ ಮುಮ್ಮಿಗಟ್ಟಿ ಸಾ: ಕರಡಿಗುಡ್ಡ
2. ಶ್ರೀಮತಿ ಮಲ್ಲವ್ವ ಕೋಂ ಶಂಕ್ರಪ್ಪ ಗುತ್ತೆಪ್ಪನವರು, ಸಾ:ಕರಡಿಗುಡ್ಡ
3. ಶ್ರೀ ಕರೆಪ್ಪಾ ಪಕ್ಕೀರಪ್ಪ ಮಾದರ, ಸಾ:ಕರಡಿಗುಡ್ಡ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎಸ್. ಹುಚ್ಚಾಚಾರಿ
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿ.ಆರ್. 888

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಅಪಜೀ 15 ಎಫ್‌ಪಿಸಿ 2006, ಬೆಂಗಳೂರು, ದಿನಾಂಕ: 06ನೇ ಮಾರ್ಚ್ 2006

ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದ ಮೊಮೋರಾಂಡ್ಯಮ್ ಆಫ್ ಆರ್ಟಿಕಲ್ ಅಸೋಸಿಯೇಷನ್ಸ್ ನಿಯಮ 23(1) ರಲ್ಲಿ ಪ್ರದತ್ತವಾದ ಅಧಿಕಾರದಡಿಯಲ್ಲಿ ಕರ್ನಾಟಕ ರಾಜ್ಯ ಅರಣ್ಯ ಅಭಿವೃದ್ಧಿ ನಿಗಮದ ಆಡಳಿತ ಮಂಡಳಿಯ ನಿರ್ದೇಶಕನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಿದೆ.

1. ಡಾ: ಸುಬ್ರಹ್ಮಣ್ಯಂ, ಭಾಆಸೇ, ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಬೆಂಗಳೂರು.
2. ಶ್ರೀ ಲುಕೋಸ್ ವಲ್ಲತರೈ, ಭಾಆಸೇ, ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಪೇಪರ್ ಮಿಲ್ಸ್ (ನಿ), ಬೆಂಗಳೂರು.
3. ಶ್ರೀ ವಿ.ಪಿ. ಹಿರೇಮಠ್ ಭಾಆಸೇ., ವ್ಯವಸ್ಥಾಪಕ ನಿರ್ದೇಶಕರು, ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಪಿ.ಆರ್. 801

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 09 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2006

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಚಾಮರಾಜನಗರ ಜಿಲ್ಲೆ ಕೊಳ್ಳೇಗಾಲ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ. ಕೊಳ್ಳೇಗಾಲ, ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಚಿಕ್ಕಮಲ್ಲಯ್ಯ ತಂದೆ ಗುಂಡಪ್ಪ, ಕಾಮಗೆರೆ, ಕೊಳ್ಳೇಗಾಲ ತಾಲ್ಲೂಕು.
2. ಶ್ರೀ ವೆಂಕಟಸ್ವಾಮಿ ತಂದೆ ಬಿ.ಎಸ್. ವೆಂಕಟರಮಣ ಶೆಟ್ಟಿ, ಬೂದಬಾಳು, ಕೊಳ್ಳೇಗಾಲ ತಾಲ್ಲೂಕು.
3. ಶ್ರೀಮತಿ ಅಲ್ಪನ್ ಮೇರಿ ಕೋಂ ಲೇಟ್ ಬಿಲವೇಂದ್ರನ್, ಮಾರ್ಟಳ್ಳಿ, ಕೊಳ್ಳೇಗಾಲ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 803

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 08 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2006

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ತಿಮ್ಮಣ್ಣನಾಯಕನಕೋಟೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ತಿಮ್ಮಯ್ಯ ಬಿನ್ ಗಂಗಪ್ಪ
2. ಶ್ರೀಮತಿ ಯಶೋಧಮ್ಮ ಕೋಂ ವೇಮಣ್ಣ, ತೋರೆಭೀರನಹಳ್ಳಿ
3. ಶ್ರೀ ಸಿ. ಬಸವರಾಜು ಬಿನ್ ಚಿತ್ತಪ್ಪ, ತಿಮ್ಮಣ್ಣನಾಯಕನಕೋಟೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 804

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## COMMERCE & INDUSTRIES SECRETARIAT

### NOTIFICATION

### No. CI.04:MMM.2005, Bangalore, Dated: 10th March 2006

In pursuance of Section 5 read with Section 8 of the Mines and Minerals (Development and Regulation) Act, 1957, and after obtaining approval of Government of India, Ministry of Mines, Department of Mines, New Delhi vide their letter No. 5/75/2005-M.IV dated 19.01.2006, the Government of Karnataka hereby accords sanction for grant of Mining Lease for a period of 20 (Twenty) years in favour of M/s. Anjana Minerals for Iron ore over an area of 11-10 acres (Eleven point one Zero acres) in Sy. No. 4 of Bedarabommanahalli village, Chitradurga Taluk and District, as per the sketch furnished by the Director of Mines and Geology, Bangalore subject to compliance of the provisions of the Mines and Minerals

(Development and Regulation) Act, 1957 and Mineral Concession Rules, 1960 as amended from time to time and other applicable Acts and Rules including Forest (Conservation) Act, 1980 and rules made there under.

Sanctioning of this Mining lease is subject to the terms and conditions appended hereto.

By Order and in the name of the Governor of Karnataka,

**S.S. PATTANASHETTI**

Additional Secretary to Government (Mines)

Commerce & Industries Department.

**TERMS AND CONDITIONS OF THE MINING LEASE SANCTIONED IN GOVERNMENT NOTIFICATION NO. CI.04:MMM 2005 Dated 10.03.2006.**

a) Mining lease should be in respect of **Iron ore** only. If other minerals are found in association with **Iron ore**, they should be brought to the notice of Government and if the lessee desires to mine these minerals along with **Iron ore**, he/she/it should do so only after the consent of Government is obtained in writing.

b) If berul or any other substance prescribed U/S 3 of the Atomic Energy Act, XXIX of 1948 is found to occur in the property under the lease, the lessee shall make available such mineral to the Government of India.

c) The lease shall also be subject to the provisions of Rules in Chapter IV of the Minerals Concession Rules, 1960.

d) The lease shall also be subject to the Rules, issued U/S 18 of the Mines & Minerals (D&R) Act, 1957.

e) The lessee shall pay to the Director of Mines and Geology in Karnataka, Bangalore, necessary Security Deposit for due observance of the terms and conditions of the lease in accordance with Rule 32 of the lease issued to him.

f) The lessee shall be governed by all conditions that may be incorporated in the lease deed, to be executed.

g) The lessee shall abide by the rules contained in the Karnataka State Forest Manual, if the lease area covers any forestland.

h) Government shall have the right of purchasing the ore at current market rates.

i) The lease would be determined if the lessee fails to commence execution of the lease deed.

j) The area mentioned above is subject to verification after actual survey and demarcation.

k) The lease shall be for a period of **TwentyYears**.

l) The lessee/s shall pay dead rent, cesses and royalty as detailed below:-

**DEAD RENT PAYABLE PER HECTARE PER ANNUM**

| | |
|---|---|
| Ist year of the lease | : Rs. 100/- |
| 2nd year to 5th year of the lease | : Rs. 140/- |
| 6th year to 10th year of the lease | : Rs. 280/- |
| 11th year of the lease & onwards | : Rs. 400/- |

**Surface Rent**: Rs.2.50 per hectare per annum on the area used by the lessee/s for mining purposes.

**Local & other Cesses**: As prevalent in Chitradurga district.

**Royalty**: At the rate prescribed in Second Schedule to the Mines & Minerals (D&R) Act, 1957 and as amended from time to time.

m) The total area held by the applicant/s under mining lease including the present one, shall not exceed 10 Sq.Km.

n) Mining operations shall not be commenced/conducted unless a qualified manager and other supervisory staff are appointed as required under the Matalliferous Mines Regulations, 1961 and relevant notices are sent to the Director-General of Mines Safety, Dhanbad with a copy of the same to the concerned Director of Mines Safety.

**S.S. PATTANASHETTI**

P.R. 797

Additional Secretary to Government (Mines)

Commerce & Industries Department.

**NOTIFICATION**

**No. CI.52:MMM.2005, Bangalore, Dated: 14th March 2006**

In pursuance of sub-section (2) of Section 8 of the Mines and Minerals (Development and Regulation) Act, 1957, the Government of Karnataka hereby accords sanction for First renewal of Mining Lease No. 699 for a period of 20 years (Twenty years only) w.e.f. 24.05.1996 in favour of Shri H.P. Manjunath for Iron Ore over an area of 7.50 acres (Seven point five zero acres only) in Jambunathanahalli village, Hospet taluk, Bellary district, with the boundries as mentioned below and as per the sketch furnished by the Director of Mines and Geology, Bangalore subject to compliance of the provisions of the Mines and Minerals (Development and Regulation) Act, 1957 and Mineral Concession Rules, 1960 as amended from time to time and other applicable Acts and Rules including Forest (Conservation) Act, 1980 and rules made there under.

**BOUNDARIES**

| | | | |
|---|---|---|---|
| On the North by | ML No. 1806 of R. Pampapathy area. | On the South by | Area applied by Sri H.N. Prema Kumar. |
| On the East by | Sandur Taluk Boundary. | On the West by | Area applied by Sri H.N. Prema Kumar |

The renewal of this Mining Lease is also subject to obtaining Forest clearance under Section 2 of Forest Conservation, Act, 1980 and also subject to the terms and conditions appended hereto.

By Order and in the name of the Governor of Karnataka

**JAGADISH JOIS**

Under Secretary to Government (Mines)

Commerce & Industries Department.

**TERMS AND CONDITIONS OF THE FIRST RENEWAL OF MINING LEASE NO. 699 SANCTIONED IN GOVERNMENT NOTIFICATION NO. CI.52:MMM 2005 Dated 14.03.2006.**

a) Mining lease should be in respect of **Iron ore** only. If other minerals are found in association with **Iron ore**, they should be brought to the notice of Government and if the lessee desires to mine these minerals along with **Iron ore**, he/she/it should do so only after the consent of Government is obtained in writing.

b) If berul or any other substance prescribed U/S 3 of the Atomic Energy Act, XXIX of 1948 is found to occur in the property under the lease, the lessee shall make available such mineral to the Government of India.

c) The lease shall also be subject to the provisions of Rules in Chapter IV of the Minerals Concession Rules, 1960.

d) The lease shall also be subject to the Rules, issued U/S 18 of the Mines & Minerals (D&R) Act, 1957.

e) The lessee shall pay to the Director of Mines and Geology in Karnataka, Bangalore, necessary Security Deposit for due observance of the terms and conditions of the lease in accordance with Rule 32 of the lease issued to him.

f) The lessee shall be governed by all conditions that may be incorporated in the lease deed, to be executed.

g) The lessee shall abide by the rules contained in the Karnataka State Forest Manual, if the lease area covers any forestland.

h) Government shall have the right of purchasing the ore at current market rates.

i) The lease would be determined if the lessee fails to commence execution of the lease deed.

j) The area mentioned above is subject to verification after actual survey and demarcation.

k) The lease shall be for a period of **TwentyYears w.e.f 24.05.1996**.

l) The lessee/s shall pay dead rent, cesses and royalty as detailed below:-

**DEAD RENT PAYABLE PER HECTARE PER ANNUM**

| | |
|---|---|
| Ist year of the lease | : Nil |
| 2nd year to 5th year of the lease | : Not applicable |
| 6th year to 10th year of the lease | : Not applicable |
| 11th year of the lease & onwards | : Rs. 400/- |

**Surface Rent**: Rs.2.50 per hectare per annum on the area used by the lessee/s for mining purposes.

**Local & other Cesses**: As prevalent in Bellary district.

**Royalty**: At the rate prescribed in Second Schedule to the Mines & Minerals (D&R) Act, 1957 and as amended from time to time.

m) The total area held by the applicant/s under mining lease including the present one, shall not exceed 10 Sq.Km.

n) Mining operations shall not be commenced/conducted unless a qualified manager and other supervisory staff are appointed as required under the Matalliferous Mines Regulations, 1961 and relevant notices are sent to the Director-General of Mines Safety, Dhanbad with a copy of the same to the concerned Director of Mines Safety.

**JAGADISH JOIS**
P.R. 799 Under Secretary to Government (Mines)
Commerce & Industries Department.

**ಸಹಕಾರ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಸಿಎಂಡಬ್ಲ್ಯೂ 29 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2006**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 29 ಸಿಎನ್‌ಎಸ್ 2006 ದಿನಾಂಕ: 8.3.2006 ರಲ್ಲಿ ಧಾರವಾಡ ಜಿಲ್ಲಾ ಸಹಕಾರ ಹಾಲು ಉತ್ಪಾದಕರುಗಳ ಒಕ್ಕೂಟ ನಿಯಮಿತ ಇದಕ್ಕೆ ನಾಮನಿರ್ದೇಶನಗೊಂಡಿರುವ ಶ್ರೀಮತಿ ಪುಷ್ಪಾ ವಿ. ಸೋಮಪ್ಪ ಸಾ: ಮಂಡಲಗೇರಿ ಕಾಂಪೌಂಡ್ ಮಾಳಮಡ್ಡಿ ಧಾರವಾಡ ಇವರ ಹೆಸರನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿದ್ದು ಅದರಂತೆ ಓದಿಕೊಳ್ಳತಕ್ಕದ್ದು

"ಶ್ರೀಮತಿ ಪುಷ್ಪಾ ವಿ. ಸೋಮಾಪುರ. ಮಂಡಲಗೇರಿ ಕಾಂಪೌಂಡ್, ಮಾಳಮಡ್ಡಿ, ಧಾರವಾಡ"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 881 **ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 56 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 21 ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ತೋಟ ಉತ್ಪನ್ನ ಮಾರಾಟ ಸಹಕಾರ ಸಂಘ ನಿ. (ತುಮ್‌ಕೋಸ್) ಚನ್ನಗಿರಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಜಿ.ವಿ. ಮಲ್ಲಿಕಾರ್ಜುನ ಬಿನ್ ಜಿ. ವೀರಭದ್ರಪ್ಪ ಲಿಂಗದಹಳ್ಳಿ ಗ್ರಾಮ ಚನ್ನಗಿರಿ ತಾಲ್ಲೂಕು.
2. ಶ್ರೀಮತಿ ಸುಧಾ ಕೋಂ ಕೆ.ಬಿ. ಪಂಚಾಕ್ಷರಿ, ಕಗತ್ತೂರು ಗ್ರಾಮ ಚನ್ನಗಿರಿ ತಾಲ್ಲೂಕು.
3. ಶ್ರೀ ಜಿ. ಹನುಮಂತಪ್ಪ ತಾಯಿ ಕೆಂಚಮ್ಮ, ದಾಗಿನಕಟ್ಟೆ ಗ್ರಾಮ, ಚನ್ನಗಿರಿ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 882 **ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 71 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಎಸ್. ಕೃಷ್ಣನಾಯ್ಕ ತಂದೆ ಸಾಮ್ಯನಾಯ್ಕ ಮರಿಯಮ್ಮನಹಳ್ಳಿ ತಾಂಡ, ಹೊಸಪೇಟೆ ತಾಲ್ಲೂಕು ಇವರನ್ನು ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಹೊಸಪೇಟೆ, ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 883 **ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 72 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ರಾಯಚೂರು ಜಿಲ್ಲೆ

ಲಿಂಗಸುಗೂರು ತಾಲೂಕಿನ ರೋಡಲಬಂಡಾ (ಯುಕೆಪಿ) ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀಮತಿ ನೀಲಗಂಗವ್ವ ಗಂಡ ಗದ್ದೆಪ್ಪ ವಾಲ್ಮೀಕಿ, ಸಾ: ಚಿಕ್ಕಉಪ್ಪೇರಿ ತಾ: ಲಿಂಗಸಗೂರು.
2. ಶ್ರೀ ನಿಂಗಪ್ಪ ತಂದೆ ಕುಪ್ಪಣ್ಣ ಕಲ್ಮಂಗಿ ಸಾ: ಸುಣಕಲ್
3. ಶ್ರೀಮತಿ ನಾಗಮ್ಮ ಗಂಡ ಅಯ್ಯಣ್ಣ ಮೇಟಿ ಸಾ: ರೋಡಲಬಂಡಾ ತಾ: ಲಿಂಗಸಗೂರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 884

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಆರ್ಥಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಆಇ 18 ಮುಭನಿ 2006, ಬೆಂಗಳೂರು ದಿನಾಂಕ:3ನೇ ಏಪ್ರಿಲ್ 2006

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ವಂತಿಕೆದಾರರಿಗೆ ಸಾಮಾನ್ಯ ಭವಿಷ್ಯನಿಧಿ ಲೆಕ್ಕದಲ್ಲಿ ಜಮೆಯಾಗಿರುವ ಶಿಲ್ಕಿನ ಮೇಲೆ ದಿನಾಂಕ:1.4.2005 ರಿಂದ ಜಾರಿಗೆ ಬರುವಂತೆ, ಬಡ್ಡಿ ದರವನ್ನು ಶೇ. 8ರಂತೆ ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 885

**ಎಲ್ ಶ್ರೀನಿವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ(ಆಡಳಿತ ಮತ್ತು ಮುಂಗಡಗಳು)

## ಸಹಕಾರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 75 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 21 ನೇ ಮಾರ್ಚ್ 2006

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ರಾಯಚೂರು ಜಿಲ್ಲೆ ಲಿಂಗಸಗೂರು ತಾಲ್ಲೂಕಿನ ಮೆದಕಿನಾಳ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ಮೆದಕಿನಾಳ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಹನುಮಂತ ದುರುಗಪ್ಪ ಸಾ: ಮೆದಕಿನಾಳ್
2. ಶ್ರೀ ಮಲ್ಲಿಕಾರ್ಜುನ ಶರಣಪ್ಪ ಸಾ: ಮೆದಕಿನಾಳ್
3. ಶ್ರೀಮತಿ ಗಂಗಮ್ಮ ಛತ್ರಪ್ಪ ಸಾ: ಯರದೊಡ್ಡಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 886

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

### ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 84 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 21 ನೇ ಮಾರ್ಚ್ 2006

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ನಲ್ಲೂರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ ನಲ್ಲೂರು ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಅಲ್ಲಭಕಷ್ ಬಿನ್ ಬಡಗಿ ಖಾಸೀಂಸಾಬ್, ನಲ್ಲೂರು ಕ್ಯಾಂಪ್, ಕಸಬಾ ಹೋಬಳಿ, ಚನ್ನಗಿರಿ ತಾಲ್ಲೂಕು
2. ಶ್ರೀಮತಿ ಬಿ.ಆರ್. ಸುಧಾ ಕೋಂ ಶಿವಕುಮಾರ್, ಬಸವೇಶ್ವರ ನಗರ ನಲ್ಲೂರು, ಚನ್ನಗಿರಿ ತಾಲ್ಲೂಕು
3. ಶ್ರೀ ಮಲ್ಲಪ್ಪ ಬಿನ್ ವೀರಪ್ಪ, ಅರಸನಘಟ್ಟ ಗ್ರಾಮ, ಚನ್ನಗಿರಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 887

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## URBAN DEVELOPMENT SECRETARIAT

### NOTIFICATION

### No. UDD 154 BEMRUPRA 2004, Bangalore, Dated: 18th April 2006

In exercise of the powers conferred under section 14-B of the Karnataka Town and Country Planning Act, 1961 (Karnataka Act 11 of 1963), the State Government intends to modify certain terms and conditions to the Notification No. UDD 154 BEMRUPRA 2004, dated 18.1.05 for the grant of Transferable Development Rights by the Municipal Corporations constituted under the Karnataka Municipal

Corporations Act, 1976 in the State (hereinafter called "Authority"). The draft of the modified terms and conditions is hereby published for the information of the public to entertain suggestions/objections from the interested persons within a period of 30 days from the date of publication of this Notification in the Official Gazette.

Objections/suggestions if any, may be addressed to the Director of Town Planning, Multistoried Buildings, Dr. B.R. Ambedkar Road, Bangalore-560 001. Objections/suggestions received within the period specified above will be considered by the State Government.

**Modified Terms and Conditions:-**

1. In the terms and condition No.10, for the figure 0.6, figure 0.5 shall be substituted.
2. For the terms and condition N.11, the following shall be substituted:

"In case of D.R.C. arising out of land surrendered free of cost for road widening the Authority may consider relaxing the side and rear setbacks, coverage and parking to a maximum of fifty per cent, when the permissible Floor Area Ratio cannot be achieved. This relaxation is permissible in the remaining part of the plot after surrender. While exercising the above power, the Authority shall finalise the building line for the entire road taken up for widening, keeping in view the existing developments, feasibility and smooth flow of traffic by notifying the same. No construction shall be allowed in violation of such notified building line."

3. For the terms and condition No.12, the following shall be substituted:

"(a) A.D.R.C. can be purchased for utilization in respect of a building already existing upto a height of 15.0 meters provided building is constructed as per the approved plan. In such cases additional setbacks need not be insisted, but there shall not be any relaxation for the area required for parking, provided it satisfies all the limitations prescribed in the terms and conditions.

(b) For the existing buildings with more than 15 meters height, 12(a) provision may be applied provided the owner of the building produces NOC from the fire force and other concerned authorities."

By Order and in the name of Government of Karnataka,

**N.Y. SAGAR**

Under Secretary to Government

Urban Development Department.

P.R. 889

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂ.ಇ. 644 ಮುನೋಮು 2004, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2006**

ನೋಂದಣಿ ಮತ್ತು ಮುದ್ರಾಂಕ ಕಾಯ್ದೆ 1957ರ (1957ರ ಕರ್ನಾಟಕ ಕಾಯ್ದೆ–34 ಕಲಂ 9(1)ಬಿ ರೊಂದಿಗೆ, ಕರ್ನಾಟಕ ಮುದ್ರಾಂಕ ನಿಯಮಗಳು 1958ರ ನಿಯಮ 11–ಎ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, Subex Systems Limited ಇವರು ಒಟ್ಟು 15,18,51,613/– ಲಕ್ಷ ರೂಪಾಯಿಗಳ ಮೌಲ್ಯದ ಷೇರುಗಳನ್ನು ವಿತರಿಸಲು ತಗಲುವ ಮುದ್ರಾಂಕ ಶುಲ್ಕವನ್ನು ದಿನಾಂಕ:15.2.2006 ರಂದು ಒಟ್ಟು ರೂ.1,55,852/– (ಒಂದು ಲಕ್ಷದ ಐವತ್ತೈದು ಸಾವಿರದ ಎಂಟು ನೂರ ಐವತ್ತೆರಡು ರೂಪಾಯಿಗಳು ಮಾತ್ರ) ಗಳನ್ನು ಸಂದಾಯಿಸಿರುತ್ತಾರೆಂದು ಕರ್ನಾಟಕ ಸರ್ಕಾರವು ಪ್ರಕಟಿಸುತ್ತದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 644 ಮುನೋಮು 2004, ದಿನಾಂಕ:15.4.2006 ರ ಪ್ರಕಾರ ಸಂಚಿತ ಮುಂದ್ರಾಕ ಶುಲ್ಕವನ್ನು ಮೊದಲ ಬಾರಿಗೆ ಸಂದಾಯಿಸಲಾಗಿದೆ ಎಂಬ ಪದಗಳನ್ನು ಬಾಂಡ್ ಪತ್ರಗಳ ಮೇಲೆ ಮುದ್ರಿಸಿ ಬಿಡುಗಡೆ ಮಾಡಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ಮುದ್ರಾಂಕ ನಿಯಮಾವಳಿಗಳ ನಿಯಮ 11–ಎ (3)ರ ಪ್ರಕಾರ ಸದರಿ ಸಂಸ್ಥೆಯು ವರ್ಗಾಯಿಸಿದ ನಿರ್ದಿಷ್ಟ ಸಂಖ್ಯೆಯ ಷೇರುಗಳ ವರದಿಯನ್ನು ಸರ್ಕಾರಕ್ಕೆ ತಪ್ಪದೇ ಕಳುಹಿಸತಕ್ಕದ್ದು ಹಾಗೂ ಕರ್ನಾಟಕ ಮುದ್ರಾಂಕ ನಿಯಮಾವಳಿಯಲ್ಲಿನ ನಿಯಮ 11–ಎ(4)ರ ಪ್ರಕಾರ ಸರ್ಕಾರದ ಸಂಬಂಧಪಟ್ಟ ಅಧಿಕಾರಿಗಳು ಬಾಂಡ್‌ಗಳ ವಿತರಣೆಗೆ ಸಂಬಂಧಿಸಿದಂತೆ ನಿರ್ವಹಿಸಲಾದ ರಿಜಿಸ್ಟರ್ ಪುಸ್ತಕ, ದಾಖಲೆಗಳನ್ನು ಪರಿಶೀಲಿಸಲು ಮತ್ತು ತಪಾಸಣೆ ನಡೆಸಲು ಸದರಿ ಸಂಸ್ಥೆಯು ಅವಕಾಶ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 890